ರಾಷ್ಟ್ರೀಯ ಜೀವನ ಚರಿತ್ರೆ ಮಾಲೆ

# ಈಶ್ವರಚಂದ್ರ ವಿದ್ಯಾಸಾಗರ

ಎಸ್.ಕೆ.ಬೋಸ್

ಅನುವಾದ

ಸದಾಶಿವ ಒಡೆಯರ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪರಿವಿಡಿ


| | | |
|---|---|---|
| 1. | ವಿಷಮ ಪರಿಸ್ಥಿತಿ | 1 |
| 2. | ಪ್ರತಿಭೆಯ ಅರಳುವಿಕೆ | 10 |
| 3. | ದೀಪ ಬೆಳಗಿತು | 19 |
| 4. | ವಿಧವೆಯರ ಕಷ್ಟಪರಿಹಾರ | 26 |
| 5. | ಬಹುಪತ್ನಿತ್ವ ವಿರೋಧಿ ಆಂದೋಲನ | 40 |
| 6. | ಉಳಿದ ರಂಗಗಳಲ್ಲಿ | 46 |
| 7. | ಶಿಲ್ಪಿ, ನಿರ್ಮಾಣಕಾರ | 53 |
| 8. | ನೊಂದವರ ಗೆಳೆಯ | 60 |
| 9. | ವಿದ್ಯಾಸಾಗರರ ಗುಣವಿಶೇಷಗಳು | 68 |
| 10. | ಒಂದು ಯುಗದ ಕೊನೆ | 74 |

# 1. ವಿಷಮ ಪರಿಸ್ಥಿತಿ

ಹತ್ತೊಂಬತ್ತನೇ ಶತಮಾನವು ಭಾರತದ ಇತಿಹಾಸದಲ್ಲಿ ಒಂದು ದೊಡ್ಡ ಪುನರುತ್ಥಾನದ ಕಾಲ. ಪಾಶ್ಚಿಮಾತ್ಯ ರಾಷ್ಟ್ರಗಳ ಸಂಪರ್ಕದಿಂದ ಭಾರತೀಯ ಜೀವನದ ವಿವಿಧ ರಂಗಗಳಲ್ಲಿ ಒಂದು ಹೊಸ ಜೀವಕಳೆ ಹಾಗೂ ಉತ್ಸಾಹ ಕಂಡುಬಂದ ಕಾಲವದು. ಅಧಃಪತನದ ಕೊಳೆಯಿಂದ ತೊಳಲಾಡುತ್ತಿದ್ದ ದೇಶವನ್ನು ಮೇಲೆತ್ತಲು ಪ್ರಜ್ಞಾಶೀಲ ಪ್ರಯತ್ನಗಳು ಎಲ್ಲೆಡೆ ಕಾಣತೊಡಗಿದ್ದವು. ಈ ಕಾಲದಲ್ಲಿ ದೇಶದ ಪುನರುತ್ಥಾನಕ್ಕಾಗಿ ಖಚಿತವೂ, ವೈಶಿಷ್ಟ್ಯಪೂರ್ಣವೂ ಆದ ಮಹತ್ತರ ಕೊಡುಗೆ ಇತ್ತವರಲ್ಲಿ ಶ್ರೀ ಈಶ್ವರ ಚಂದ್ರ ವಿದ್ಯಾಸಾಗರ ಅವರು ಅಗ್ರಗಣ್ಯರು. ಯಾವುದೇ ದೇಶದ ರಾಜಕೀಯ ಸುಧಾರಣೆ ಆಗುವುದಕ್ಕಿಂತ ಮೊದಲು ಶೈಕ್ಷಣಿಕ ಸುಧಾರಣೆ ಯನ್ನೊಳಗೊಂಡ ಸಾಮಾಜಿಕ ಬದಲಾವಣೆ ಕಂಡು ಬರುವುದುಂಟು. ಭಾರತದ ಇತಿಹಾಸದಲ್ಲಿಯೂ ಇದೇ ರೀತಿ ಆಯಿತೆಂದು ಹೇಳಬಹುದು. ವಿದ್ಯಾಸಾಗರ ಅವರು ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರವನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಆರಿಸಿಕೊಂಡು, ಬರಲಿರುವ ರಾಜಕೀಯ ಜಾಗ್ರತೆಗೆ ಅಡಿಪಾಯ ಹಾಕಿಕೊಟ್ಟರು.

ಈಶ್ವರ ಚಂದ್ರ ವಿದ್ಯಾಸಾಗರ ಅವರ ಕಥೆ, ಸಾಮಾಜಿಕ ಹಾಗೂ ಶೈಕ್ಷಣಿಕ ಪ್ರಗತಿಗಾಗಿ ತ್ಯಾಗದ ಹಾಗೂ ಬಿಡುವಿಲ್ಲದ ಹೋರಾಟ ನಡೆಸಿದ ಸರಳ ಹಾಗೂ ದೃಢ ನಿರ್ಧಾರದ ವ್ಯಕ್ತಿಯ ಅಮರ ಕಥೆಯಾಗಿದೆ. ಅವರ ಪ್ರಯತ್ನಗಳಿಗೆ ಮಹಾ ಔನ್ನತ್ಯವನ್ನು ಒದಗಿಸಿದ ಗುಣವೆಂದರೆ ಅವರ ಅಸಾಧಾರಣವಾದ ಧೈರ್ಯ.

ಕೆಲವೊಂದು ಸಂದರ್ಭಗಳಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳ ಚೈತನ್ಯದಾಯಕ ಸಂಪರ್ಕದಿಂದ ಉದ್ಭವಿಸಿದ ವಿಚಾರಗಳು ನಮ್ಮ ಮೌಲ್ಯಗಳನ್ನು ಪುನರ್ಮೌಲ್ಯೀ ಕರಣಕ್ಕಾಗಿ ತೊಡಗಿಸುವ ಕ್ರಾಂತಿಕಾರಕ ವಿಚಾರಗಳಾಗಿದ್ದವು. ಭಾರತೀಯರ ಪ್ರಾಚೀನ ಪರಂಪರೆಗಳು ವೈಜ್ಞಾನಿಕ ದೃಷ್ಟಿಯ ಸೂಕ್ಷ್ಮ ಪರಿಶೀಲನೆಗೆ ಒಳಗಾಗಿದ್ದವು. ಅನೇಕರು ತಮ್ಮ ವಿವೇಚನಾ ಶಕ್ತಿಯನ್ನು ಕಳೆದುಕೊಂಡು, ವಿಚಾರಗಳ ಅತಿರೇಕಕ್ಕೆ ಒಳಗಾದರು. ಇನ್ನೊಂದೆಡೆ ಪ್ರಾಚೀನದ ಪರಂಪರೆಯಲ್ಲಿದ್ದ ಅಚಲವಾದ ಶ್ರದ್ಧೆ ಈ ಹೊಸ ವಿಚಾರಗಳ ಬೆಳಕು ಒಳಬಾರದಂತೆ ದಟ್ಟವಾದ ಗೋಡೆಯನ್ನು ಕಟ್ಟಲು ಯತ್ನಿಸುತ್ತಿತ್ತು. ಹೀಗೆ ಒಂದೆಡೆ ಅಂಧಶ್ರದ್ಧೆ ಇನ್ನೊಂದೆಡೆ ಪ್ರತಿಯೊಂದನ್ನೂ ಸಂದೇಹಿಸುವ ವಿವೇಕ ವಾದ, ಇವುಗಳ ತಾಕಲಾಟದ ಕಾಲವು ಅದಾಗಿದ್ದರಿಂದ

ಅಂದಿನ ಪರಿಸ್ಥಿತಿ ಕಷ್ಟಮಯವಾಗಿದ್ದಿತ್ತು. ವಿದ್ಯಾಸಾಗರರು ಸಮಕಾಲೀನ ವಿವೇಕವಾದದ ಜಂಜಾಟದಲ್ಲಿ ಬಿದ್ದು ತಲೆ ಕೆಡಿಸಿಕೊಳ್ಳಲಿಲ್ಲ. ಆದರೂ ಅವರು ಹಳೆಯ ಪರಂಪರೆಯ ಶಿಂಪಿನಲ್ಲಿಯೂ ಹುದುಗಿರಲಿಲ್ಲ. ಕ್ರಾಂತಿಕಾರನ ಉತ್ಸಾಹ ಹಾಗೂ ಸಮಾಜ ಸುಧಾರಕನ ಸಹನೆ ಇವೆರಡನ್ನೂ ಅಳವಡಿಸಿಕೊಂಡು, ಪ್ರಗತಿಪರ ಸಾಮಾಜಿಕ ವಿಚಾರಸರಣಿಗೆ ಅವರು ಮಾರ್ಗದರ್ಶಕರಾದರು. ರಾಜಾರಾಮ್ ಮೋಹನ್‌ರಾಯರು ಮೊಟ್ಟ ಮೊದಲಿನ ಆಧುನಿಕ ಭಾರತೀಯರೆನಿಸಿಕೊಂಡರೆ, ಪಣಿಕ್ಕರರ ಮಾತಿನಲ್ಲಿ ವಿದ್ಯಾಸಾಗರರು ಹಲವು ದೃಷ್ಟಿಯಿಂದ ಅವರ ನೇರ ವಂಶಜರೆಂದೇ ಹೇಳಬೇಕು. ತಮ್ಮ ಪರಂಪರಾಗತ ಧಾರ್ಮಿಕ ಪರಂಪರೆಯ ಹಾಗೂ ಬೆಳೆದ ಪರಿಸರದ ವಿಚಾರಸರಣಿಯನ್ನು ತಕ್ಷಣದಲ್ಲಿ ಕುಗ್ಗಿಸಿ, ವಿವೇಕ ಹಾಗೂ ಪ್ರಗತಿಯತ್ತ ತಮ್ಮ ವಿಚಾರಗಳಿಗೆ ಗತಿ ನೀಡುವ ಶಕ್ತಿಯುಳ್ಳವರು ಅವರಾಗಿದ್ದರು.

ಶಿಕ್ಷಣ ಕ್ಷೇತ್ರದಲ್ಲಿಯೂ ಅವರ ವಿಚಾರಗಳ ವೈಶಾಲ್ಯತೆಯನ್ನು ನಾವು ಕಾಣಬಹುದು. ತಾವು ಸಾಂಪ್ರದಾಯಕವಾದ ಶಿಕ್ಷಣದಿಂದ ಪ್ರಯೋಜನ ಹೊಂದಿದವರಾಗಿದ್ದರೂ, ಅವರು ಪಾಶ್ಚಿಮಾತ್ಯ ಸಂಸ್ಕೃತಿಯ ಬೆಳಕನ್ನು ಕಡೆಗಣಿಸಲಿಲ್ಲ. ಅದಕ್ಕೆ ಆತಂಕವನ್ನುಂಟುಮಾಡಲೂ ಇಲ್ಲ. ತಮ್ಮ ಆದರ್ಶ ಶಿಕ್ಷಣದ ರೂಪರೇಷೆಯಲ್ಲಿ ಅವರು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಶಿಕ್ಷಣಗಳ ಶ್ರೇಷ್ಠ ಗುಣಗಳೆರಡನ್ನೂ ಸಂಯೋಜಿಸಲು ಯತ್ನಿಸಿದರು. ಜನಸಾಮಾನ್ಯರಲ್ಲಿ ಶಿಕ್ಷಣ ಹಾಗೂ ವಿವೇಕ ಹರಡದ ಹೊರತು, ಸಾಮಾಜಿಕ ಪ್ರಗತಿ ಸಾಧ್ಯವಿಲ್ಲವೆಂದು ಅವರು ನಂಬಿದ್ದರು. ಕಳೆದ ಶತಮಾನದಾದ್ಯಂತ ಈಶ್ವರ ಚಂದ್ರರ ಹೆಸರು ಮಧುರ ವ್ಯಕ್ತಿತ್ವ ಹಾಗೂ ಪ್ರಗತಿಪರ ವಿಚಾರಗಳ ಸಂಕೇತವಾಗಿದ್ದಂತೆ ಭವ್ಯತೆ ಹಾಗೂ ಅನುಕಂಪಗಳಿಗೂ ಸಂಕೇತವಾಗಿದೆ. ಬಂಗಾಲದಲ್ಲಿ ಎಲ್ಲೆಡೆ ಜನ ಅವರನ್ನು ಪ್ರೀತಿ ಗೌರವಗಳಿಂದ ವಿದ್ಯಾಸಾಗರರೆಂದೇ ಕರೆಯುತ್ತಿದ್ದರು. ತಮ್ಮ ಜೀವನದ ಹಲವಾರು ಘಟನೆಗಳನ್ನು ಬಂಗಾಲಿಯಲ್ಲಿ ಅವರೇ ಬರೆದ ಅಪೂರ್ಣವಾದ ಆತ್ಮಕತೆಯಲ್ಲಿ ಅವರು ಒಡಮೂಡಿಸಿದ್ದಾರೆ.

ಅವರು ಮಿಡ್ನಾಪುರ ಜಿಲ್ಲೆಯ ಬಿರಸಿಂಘಾ ಎಂಬ ಹಳ್ಳಿಯಲ್ಲಿ ಹುಟ್ಟಿದರು. ದೇಶದ ಒಂದು ಮೂಲೆಯಲ್ಲಿ, ಒಂದು ಹೇಳ ಹೆಸರಿಲ್ಲದ ಹಳ್ಳಿಯಲ್ಲಿ ಒಬ್ಬ ದೊಡ್ಡ ಮನುಷ್ಯ ಹುಟ್ಟುವುದು ಅಪರೂಪ. ಆದರೆ ಇತಿಹಾಸದ ಕೈಗಳು ಮಣ್ಣಿನ ಗುಡಿಸಲು ಹಾಗೂ ಹಂಚಿನ ಮನೆಗಳಲ್ಲಿ ಭರವಸೆಗಳನ್ನು ಹುಟ್ಟಿಸುವ ಹಾಗೂ ಮಾಹಾತ್ಮರೆನಿಸಿಕೊಂಡವರನ್ನು ರೂಪಿಸಿದ ಅನೇಕ ಉದಾಹರಣೆಗಳನ್ನು ನಾವು ಕಾಣುತ್ತೇವೆ. ಬಿರಸಿಂಘಾ ಎಂಬ ಹಳ್ಳಿಯಲ್ಲಿ ಇಂಥ ಒಬ್ಬ ಬ್ರಾಹ್ಮಣನ ದೀನ ಗುಡಿಸಲಿನಲ್ಲಿ, 1820 ರ ಸೆಪ್ಟೆಂಬರ್ 26 ರಂದು ಈಶ್ವರ ಚಂದ್ರರು ಜನಿಸಿದರು. ಹುಟ್ಟುವ ಪೂರ್ವದಲ್ಲಿಯೂ ಅವರು ಎಂತಹ ಮಹಾ ವ್ಯಕ್ತಿ ಆಗುವರೆಂಬುದನ್ನು

ಒಬ್ಬ ಜ್ಯೋತಿಷ್ಯ ಹೇಳಿದ್ದರೆಂದು ತಿಳಿದುಬರುತ್ತದೆ. ಅದರಂತೆ ಅವರ ಜನನದ ನಂತರ ಅವರ ಜಾತಕವನ್ನು ಬರೆಸಿದಾಗ ಅವರೊಬ್ಬ ಮಹಾವ್ಯಕ್ತಿಯಾಗುವರೆಂತಲೂ, ಸ್ವಭಾವದಿಂದ ಹೋರಿಯಂತೆ ಹಟಮಾರಿಯಾಗುವರೆಂತಲೂ ಕಂಡುಬಂದಿತು.

ಅವರ ಮನೆತನ ಸಂಸ್ಕೃತ ಅಭ್ಯಾಸದಲ್ಲಿ ಪರಿಣತಿಯುಳ್ಳ, ಹಾಗೂ ತಮ್ಮ ಪೂರ್ವಜರ ಬಗ್ಗೆ ಅಪಾರ ಗೌರವ ಅಭಿಮಾನವುಳ್ಳ ಕುಲೀನ ಬ್ರಾಹ್ಮಣ ಮನೆತನವಾಗಿದ್ದಿತು. ಈಶ್ವರ ಚಂದ್ರರ ಅಜ್ಜಂದಿರಾದ ರಾಮಜಯ ತರ್ಕಭೂಷಣ ಅವರು ಹೂಗ್ಲಿ ಜಿಲ್ಲೆಯ ಬಲಮಾಲಿಪುರ ಎಂಬ ಹಳ್ಳಿಯಿಂದ ಬಂದವರು. ಬಹಳ ದೃಢಸಂಕಲ್ಪದವರೂ, ಸ್ವಾತಂತ್ರ್ಯ ಮನೋಪ್ರವೃತ್ತಿಯವರೂ ಆದ ಅವರು ತಮ್ಮ ಅಣ್ಣ ತಮ್ಮಂದಿರೊಡನೆ ಯಾವುದೊ ಒಂದು ವಿಷಯದ ಬಗ್ಗೆ ಜಗಳವಾಡಿದ ಸಿಟ್ಟಿನಲ್ಲಿ ತಮ್ಮ ಹೆಂಡತಿಯಾದ ದುರ್ಗಾದೇವಿ ಹಾಗೂ ಮಕ್ಕಳನ್ನು ಬಿರಸಿಂಘಾದಲ್ಲಿ ಅವಳ ತಂದೆಯ ಮನೆಯ ಬಳಿ ಕಷ್ಟದಿಂದ ದುಡಿದುಕೊಂಡು ಜೀವಿಸಲು ಬಿಟ್ಟು, ಯಾರಿಗೂ ಹೇಳದೆ ದೇಶ ಪರ್ಯಟನಕ್ಕೆ ಹೊರಟುಹೋದರಂತೆ. ಆದರೆ ಆ ಮನುಷ್ಯ ಉದಾತ್ತ ಗುಣಸಂಪನ್ನನಾಗಿದ್ದ. ಅದೇ ಅವನು ತನ್ನ ವಂಶಜನಾದ ಈಶ್ವರ ಚಂದ್ರರಿಗೆ ಬಿಟ್ಟುಹೋದ ಬಹುದೊಡ್ಡ ಬಳುವಳಿ.

ತನ್ನ ಮಕ್ಕಳೊಂದಿಗೆ ತೀರ ಬಡತನದಲ್ಲಿ ದುರ್ಗಾದೇವಿ ಕಾಲ ಕಳೆದಳು. ಅವಳ ಹಿರಿಯ ಮಗ ಠಾಕೂರದಾಸ ಬಂದೋಪಾಧ್ಯಾಯ ಹದಿನಾಲ್ಕು ಹದಿನೈದು ವರ್ಷದವನಾಗಿದ್ದಾಗ, ಜೀವನ ಮಾರ್ಗ ಕಂಡುಕೊಳ್ಳುವುದಕ್ಕಾಗಿ ಕಲಕತ್ತೆಗೆ ಹೋಗಲು ನಿರ್ಧರಿಸಿದನು. ಕಲಕತ್ತಾದ ಪರಕೀಯ ವಾತಾವರಣದಲ್ಲಿ ಜೀವನಕ್ಕೆ ಕೆಲಸವನ್ನು ಕಂಡುಕೊಳ್ಳವುದಕ್ಕೆ ಬಹಳ ಕಷ್ಟಪಡಬೇಕಾಯಿತು.

'ಜಾಬ್ ಚಾರ್ನೊಕ್' ಎಂಬ ಹೊಸ ಪಟ್ಟಣ ಆಗ ರಭಸದಿಂದ ಬೆಳೆಯುತ್ತ ಜನರ ದಟ್ಟಣೆಯಿಂದ ಗಿಜಗುಟ್ಟುತ್ತಿತ್ತು. ಲಾರ್ಡ್ ವೆಲ್ಲೆಸ್ಲಿ ಅದನ್ನು ಅರಮನೆಗಳ ಪಟ್ಟಣವೆಂಬಂತೆ ಕಟ್ಟಿದ್ದನು. ಅದು ಭವ್ಯವಾಗಿತ್ತು, ಹಾಗೂ ಪರಕೀಯ ಆಳರಸರು ಅದನ್ನು ತಮ್ಮ ಪ್ರೀತಿಯ ವಾಸಸ್ಥಾನವೆಂದು ಪರಿಗಣಿಸಿದ್ದರು. ಯಾವ ಮನಷ್ಯನಾಗಲಿ ತನ್ನ ಭವಿಷ್ಯತ್ತನ್ನು ರೂಪಿಸಿಕೊಳ್ಳಲು, ಜೀವದಿಂದ ಮಿಡಿಯುವ ಈ ಪಟ್ಟಣಕ್ಕೆ ಬರಲು ಇಚ್ಛಿಸುತ್ತಿದ್ದ. ಆಗಿನ ಕಾಲದಲ್ಲಿ ಸ್ವಲ್ಪ ಮಟ್ಟಿನ ಇಂಗ್ಲೀಷ್ ಜ್ಞಾನ ಯಶಸ್ಸಿನ ರಾಜಮಾರ್ಗವಾಗಿದ್ದಿತು. ಠಾಕೂರದಾಸ ಸ್ವಲ್ಪಮಟ್ಟಿಗೆ ಇಂಗ್ಲಿಷ್ ಕಲಿತುಕೊಂಡು ತಿಂಗಳಿಗೆ ಎರಡು ರೂಪಾಯಿಗಳ ಗಳಿಕೆಯಿಂದ ಜೀವನ ಆರಂಭಿಸಿದನು. ಅವನ ತಂದೆಯ ಸ್ನೇಹಿತನಾದ ಭಗವತ ಚರಣಸಿಂಗ ಎಂಬುವರು ಅವನಿಗೆ ಬಹಳ ರೀತಿಯಿಂದ ನೆರವಾದರು. ಕಲಕತ್ತಾದಲ್ಲಿರುವಾಗ ಅವರ ಮನೆಯಲ್ಲಿಯೇ ಇವನು ವಾಸವಾಗಿದ್ದನು. ಇಪ್ಪತ್ತನಾಲ್ಕು ವರ್ಷದವನಾದಾಗ ಠಾಕೂರ್‌ದಾಸ ಭಗವತಿದೇವಿ ಎಂಬುವಳನ್ನು ಮದುವೆಯಾದರು. ಅವರ ಮೊದಲನೇ ಮಗುವೇ ಈಶ್ವರ ಚಂದ್ರ.

ಭಗವತಿದೇವಿಯರು ಮಹಾ ಸಾಧ್ವಿಯಾಗಿದ್ದರು. ಅವರು ಬಹಳ ಪ್ರಗತಿಪರ ವಿಚಾರವುಳ್ಳವರೂ, ವಿಶಾಲ ದೃಷ್ಟಿಯುಳ್ಳವರೂ, ದಯಾಮಯಿಯೂ ಆಗಿದ್ದರು. ಈಶ್ವರ ಚಂದ್ರರು ಈ ಗುಣಗಳನ್ನು ಅವರಿಂದಲೇ ಬಳುವಳಿಯಾಗಿ ಪಡೆದುಕೊಂಡಿದ್ದು.

ಮಹೋನ್ನತ ಭವಿಷ್ಯತ್ತುಳ್ಳವನೆಂದು ಆಗಲೇ ಗುರುತಿಸಲ್ಪಟ್ಟ ಈ ಮಗು ಚಿಕ್ಕ ವಯಸ್ಸಿನಲ್ಲೇ ಅಸಾಧಾರಣ ಪ್ರತಿಭೆಯುಳ್ಳವನು, ಭರವಸೆ ಹುಟ್ಟಿಸುವಂಥವನೂ, ಚಟುವಟಿಕೆಯ ಬಾಲಕನಾಗಿ ಕಂಡುಬಂದನು. ಬಹಳ ಕಿಡಿಗೇಡಿಯಾದ ಆತ ತನ್ನ ಕಿಡಿಗೇಡಿತನದಿಂದ ಅನೇಕ ತಂದೆ ತಾಯಿಗಳಿಗೂ ನೆರೆಗೊರೆಯವರಗೂ ತೊಂದರೆ ಕೊಡುತ್ತಿದ್ದ. ಅವರೇ ತಮ್ಮ ಆತ್ಮಚರಿತ್ರೆಯಲ್ಲಿ ಹೇಳುವಂತೆ ತಂದೆ ತಾಯಿಗಳಿಂದ ಹೊಡೆತಗಳಾಗಲಿ ಬೈಗುಳಗಳಾಗಲಿ ಅವರನ್ನು ಶಿಸ್ತಿನ ನಡವಳಿಕೆಗೆ ಪರಿವರ್ತಿಸುವಲ್ಲಿ ವಿಫಲವಾದವು. ಆದರೆ ಈ ಅವ್ಯಾಹತ ಚಟುವಟಿಕೆ ಅವರ ಅಸಾಧಾರಣ ಬುದ್ಧಿಮತ್ತೆಯ ಒಂದು ಲಕ್ಷಣವೇ ಆಗಿದ್ದಿತು. ತಮ್ಮ ಪಾಠಶಾಲೆಯ ಅಭ್ಯಾಸವನ್ನು ಅತ್ಯಂತ ಸ್ವಲ್ಪ ಸಮಯದಲ್ಲಿ, ಅಂದರೆ ಕೇವಲ ಮೂರೇ ವರ್ಷದಲ್ಲಿ ಮುಗಿಸಿದರು. ಇದು ಅವರ ಗುರುಗಳಾದ ಕಾಳಿಕಾಂತ ಛಟ್ಟೋಪಾಧ್ಯಾಯ ಅವರನ್ನೊಳಗೊಂಡು ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿತು. ಅವರ ಗುರುಗಳು ಈಶ್ವರ ಚಂದ್ರರನ್ನು ಕಲಕತ್ತಾಕ್ಕೆ ಇಂಗ್ಲಿಷ್ ವಿದ್ಯಾಭ್ಯಾಸಕ್ಕೆ ಕಳುಹಿಸಬೇಕೆಂದು ಸೂಚಿಸಿದರು.

ಅವರ ಸೂಚನೆಯಂತೆ 1828 ರ ನವೆಂಬರ್ ತಿಂಗಳಲ್ಲಿ ಒಂದು ಶುಭ ದಿವಸ. ಠಾಕೂರದಾಸ, ಕಾಳಿಕಾಂತ, ಈಶ್ವರ ಚಂದ್ರ ಹಾಗೂ ಆನಂದ ರಾಮ ಎಂಬ ಆಳು ಲವಲವಿಯ ಪಟ್ಟಣವಾದ ಕಲಕತ್ತೆಗೆ ಹೊರಟರು. ಅರವತ್ತು ಮೈಲಿಗಳ ಈ ದೀರ್ಘಪ್ರವಾಸವನ್ನು ಅವರೆಲ್ಲ ಕಾಲ್ನಡಿಗೆಯಲ್ಲಿಯೇ ಮೂರು ದಿವಸಗಳಲ್ಲಿ ಪೂರೈಸಿದರು. ಈ ಪ್ರವಾಸ ಹಳೆಯದರಿಂದ ಹೊಸ ಪ್ರಪಂಚಕ್ಕೆ, ಕತ್ತಲು ಮುಸುಕಿದ ಕಷ್ಟದ ಭೂತಕಾಲದಿಂದ ಆಶಾಪೂರಿತ ಭವಿಷ್ಯದೆಡೆಗೆ, ಕ್ರಮಿಸುವ ಮಾರ್ಗದ ಪ್ರತೀಕವೂ ಆಗಿತ್ತು. ಎಷ್ಟೋ ಕಡೆ ಮಗುವನ್ನು ಬೆನ್ನಿನ ಮೇಲೆ ಎತ್ತಿಕೊಳ್ಳಬೇಕಾಗುತ್ತಿತ್ತು. ಈಶ್ವರ ಚಂದ್ರ ಪ್ರತಿಭಾನ್ವಿತ ಬಾಲಕ. ದಾರಿಯಲ್ಲಿಯೇ ಆತ ಪವಾಡದಂತೆ ತೋರುವ ಆಶ್ಚರ್ಯಕರ ಬುದ್ಧಿಮತ್ತೆಯನ್ನು ತೋರಿದ. ಮಾರ್ಗದಲ್ಲಿ ಮೈಲುಗಲ್ಲುಗಳ ಮೇಲೆ ಇಂಗ್ಲಿಷ್‌ನಲ್ಲಿ ಅಂಕಿಯನ್ನು ಬರೆಯಲಾಗಿತ್ತು. ಈಶ್ವರ ಚಂದ್ರ ಅವುಗಳು ಏನೆಂದು ತಂದೆಗೆ ಕೇಳತೊಡಗಿದ. ಠಾಕೂರದಾಸ ಇಂಗ್ಲಿಷ್ ಅಂಕಿಯನ್ನು ತೋರಿಸಿ ಹೇಳಿಕೊಟ್ಟರು. ಕಲಕತ್ತಾ ಮುಟ್ಟುವಷ್ಟರಲ್ಲಿ ಈಶ್ವರ ಚಂದ್ರರಿಗೆ ಎಲ್ಲ ಇಂಗ್ಲಿಷ್ ಅಂಕಿಗಳು ಕರಗತವಾಗಿದ್ದವು.

ಕಲಕತ್ತಾದಲ್ಲಿ ಭಗವತ ಚರಣನ ಮನೆಯಲ್ಲಿ ಆತಿಥ್ಯ ಒದಗಿತು. ಆದರೆ ಭಗವತ ಚರಣ ಅಷ್ಟರಲ್ಲಿ ತೀರಿಹೋಗಿದ್ದರು. ಅವರ ಮಗ ಜಗತ್ ದುರ್ಲಭ ಮತ್ತು ಅವರ ವಿಧವೆಯಾದ ಮಗಳು ರಾಯಮಣಿ ಇವರನ್ನು ಪ್ರೀತಿಯಿಂದ ಬರಮಾಡಿಕೊಂಡರು. ರಾಯಮಣಿ ಹಾಗೂ ಅವಳ ಅಪರೂಪದ ವಾತ್ಸಲ್ಯವನ್ನು

ಜೀವನದಾದ್ಯಂತವೂ ಈಶ್ವರ ಚಂದ್ರರು ಸದಾ ನೆನೆಸುತ್ತಿದ್ದರು. ಸಣ್ಣ ವಯಸ್ಸಿನಲ್ಲಿ ಅವಳಿಗೆ ಒದಗಿದ ವೈಧವ್ಯ ಚಿಕ್ಕ ವಯಸ್ಸಿನ ಈಶ್ವರ ಚಂದ್ರರ ಅರಳುವ ಮನಸ್ಸಿನ ಮೇಲೆ ಬಹಳವಾಗಿ ಪ್ರಭಾವ ಬೀರಿರಬೇಕು.

ಉನ್ನತ ಶಿಕ್ಷಣಕ್ಕೆ ಪ್ರವೇಶಾರ್ಹತೆ ಪಡೆಯಲು ಕೆಲವು ದಿನ ಈಶ್ವರ ಚಂದ್ರರು ಸಮೀಪದ ಪಾಠಶಾಲೆಯಲ್ಲಿ ಅಭ್ಯಾಸ ಮಾಡಿದರು. ತದನಂತರ ಅವರಿಗೆ ಇಂಗ್ಲಿಷ್ ಶಿಕ್ಷಣ ಕೊಡಬೇಕೊ ಇಲ್ಲವೇ ಸಂಸ್ಕೃತ ಪಾಠಶಾಲೆಗೆ ಸೇರಿಸಬೇಕೋ ಎಂಬ ಪ್ರಶ್ನೆ ಉದ್ಭವಿಸಿತು.

ಆ ಕ್ಲಿಷ್ಟ ಪರಿಸ್ಥಿತಿ ಆಗಿನ ಕಾಲದಲ್ಲಿ ಅತ್ಯಂತ ಸಹಜವಾದ ಪ್ರಚಲಿತ ಸಮಸ್ಯೆಗಳಿಗೆ ಅನುಗುಣವಾಗಿಯೇ ಇದ್ದಿತು. ದೇಶದಾದ್ಯಂತ ಪೌರ್ವಾತ್ಯ ಪರಂಪರೆ ಹಾಗೂ ಆಂಗ್ಲ ಸಂಸ್ಕೃತಿಯಿಂದ ಪ್ರಭಾವಿತರಾದ ವ್ಯಕ್ತಿಗಳಲ್ಲಿ ನಡೆದ ನಿರಂತರ ಘರ್ಷಣೆಯ ಪ್ರತೀಕ ಇದಾಗಿತ್ತು. ಪೌರ್ವಾತ್ಯ ಶಿಕ್ಷಣ ಹೇಗಾದರೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಯತ್ನಿಸುತ್ತಿದ್ದಂತೆ ಇಂಗ್ಲಿಷ್ ಶಿಕ್ಷಣದ ಬಗ್ಗೆ ಜನರ ಆಸಕ್ತಿ ದಿನೇ ದಿನೇ ಹೆಚ್ಚುತ್ತಲಿದ್ದಿತು. ಮೊದಮೊದಲಿಗೆ ಈಸ್ಟ್ ಇಂಡಿಯಾ ಕಂಪೆನಿಯು ದೇಶದಲ್ಲಿಯ ಸಾರ್ವಜನಿಕ ಶಿಕ್ಷಣ ತನ್ನ ಜವಾಬ್ದಾರಿಯೆಂದು ಬಗೆಯಲಿಲ್ಲ. ಆದರೆ ಸರ್ಕಾರ ಇದರಲ್ಲಿ ಆಸ್ಥೆವಹಿಸತೊಡಗಿದಂತೆ ಮೊದಮೊದಲು ಪೌರ್ವಾತ್ಯ ಶಿಕ್ಷಣಕ್ಕೆ ಆದ್ಯತೆ ನೀಡುವ ನೀತಿಯನ್ನು ತಳೆದಂತೆ ತೋರುತ್ತದೆ. ಇದು ಕಲಕತ್ತಾದಲ್ಲಿ ಒಂದು ಮದರಸಾ ಹಾಗೂ ಬನಾರಸದಲ್ಲಿ ಸಂಸ್ಕೃತ ಕಾಲೇಜು ಆರಂಭಿಸುವ ನಿರ್ಣಯದಿಂದ ಸ್ಪಷ್ಟವಾಗಿ ಕಂಡುಬಂದಿತ್ತು. ಆದರೆ ಆಗಲೇ ಇಂಗ್ಲಿಷ್ ಶಿಕ್ಷಣ ಪ್ರಸಾರ ಹೆಚ್ಚುತ್ತಲೇ ಇದ್ದಿತ್ತು. ಇಂಗ್ಲಿಷ್ ಶಿಕ್ಷಣವನ್ನು ಪಸರಿಸುವ ವಿಚಾರದಲ್ಲಿ ಅನೇಕ ಇಂಗ್ಲಿಷ್ ಗೃಹಸ್ಥರು ಆಸಕ್ತಿಯುಳ್ಳವರಾಗಿದ್ದರು. 1823 ರಷ್ಟರಲ್ಲಿಯೇ ಇಂಗ್ಲಿಷ್ ಹಾಗೂ ಯುರೋಪದ ವಿಜ್ಞಾನ ಶಿಕ್ಷಣವನ್ನು ಪ್ರಸಾರಗೊಳಿಸಬೇಕೆಂದು ಎಲ್‌ಫಿನ್‌ಸ್ಟನ್ ಹೇಳತೊಡಗಿದ್ದನು. ತದನಂತರ ಶ್ರೀರಾಮಪುರ ಗುಂಪಿನ ಮಿಶನರಿಗಳು ಹಾಗೂ ಅಲೆಗ್ಝಾಂಡರ್ ಡಫ್ ಮತ್ತು ಶ್ರೀಮಂತ ದಾನಿಗಳಲ್ಲಿ ಒಬ್ಬರಾದ ಡೇವಿಡ್ ಹೇರ್ ಮುಂತಾದವರ ಪ್ರಯತ್ನಗಳಿಂದ ಇಂಗ್ಲಿಷ್ ಶಿಕ್ಷಣ ಹಾಗೂ ಅದರ ಬೇಡಿಕೆ ಹೆಚ್ಚಾಗುತ್ತ ನಡೆದಿದ್ದಿತು. ಭಾರತೀಯರಲ್ಲಿ ಇಂಗ್ಲಿಷ್ ಶಿಕ್ಷಣದ ಪ್ರವರ್ತಕರಲ್ಲಿ ಅಗ್ರಗಣ್ಯರೆಂದರೆ ರಾಜಾರಾಮ್ ಮೋಹನ್‌ರಾಯ್ ಅವರು. ಅವರು ಇಂಗ್ಲಿಷ್ ಶಿಕ್ಷಣದ ಪರವಾಗಿ ವಾದಿಸಿದರು. ಅಷ್ಟೇ ಅಲ್ಲ, ಕೇವಲ ಸಂಸ್ಕೃತ ಶಿಕ್ಷಣವನ್ನು ಕೊಡುವ ನಿರ್ಣಯಗಳನ್ನು ಲಾರ್ಡ್ ಆ್ಯಮಸ್ಟ್ರ್ ಅವರಿಗೆ 1823 ರಲ್ಲಿ ಬರೆದ ಪತ್ರದಲ್ಲಿ ಪ್ರಬಲವಾಗಿ ವಿರೋಧಿಸಿದರು. ಅವರ ಪ್ರತಿಭಟನೆ ಆಳರಸರ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡಲಿಲ್ಲವೆಂದು ತೋರುತ್ತದೆ. 1824 ರಲ್ಲಿ ಕಲಕತ್ತಾ ಸಂಸ್ಕೃತ ಕಾಲೇಜನ್ನು ಆರಂಭಿಸಲಾಯಿತು.

ಒಳ್ಳೆಯ ಸದ್ಭಾವನೆಯಿಂದ ಪ್ರೇರಿತರಾದ ಡೇವಿಡ್ ಹೇರ್‌ರಂತೆ ಪರದೇಶೀಯರ

ಸಹಾಯದಿಂದ ಕಲಕತ್ತಾ ಸನ್ಮಾನ್ಯ ನಾಗರೀಕರಿಂದ 1817 ರಲ್ಲಿ ಪ್ರಾರಂಭಿಸಲ್ಪಟ್ಟ ಹಿಂದೂ ಕಾಲೇಜು ಪಾಶ್ಚಿಮಾತ್ಯ ವಿದ್ಯೆಯ ಹಾಗೂ ಕ್ರಾಂತಿಕಾರಕ ವಿಚಾರಗಳ ಪೋಷಕ ಸಂಸ್ಥೆಯಾಗಿ ಕಾರ್ಯಮಾಡುತ್ತಿತ್ತು. ಹಿಂದೂ ಧರ್ಮ ಕಟ್ಟಾವಾದಿಗಳ ವಿರುದ್ಧ ಚಳುವಳಿಯ ನಿಶಾನೆಯನ್ನು ಪ್ರಪ್ರಥಮ ಎತ್ತಿದವರೆಂದರೆ ಯೂರೋಪಿಯನ್ ಕ್ರಾಂತಿಕಾರಿ ದೇಶಾಭಿಮಾನಿಗಳೂ ಹಾಗೂ ಶಿಕ್ಷಕರಾಗಿದ್ದ ಎಚ್.ಎಲ್.ವಿ. ಡೆರೋಜಿಯೋ ಹಾಗೂ 'ಯಂಗ್ ಬೆಂಗಾಲಿ' ಎಂದು ಹೆಸರಾದ ಅವರ ಅನುಯಾಯಿ ಯುವಕರ ಗುಂಪು. ಅವರ ವಿರೋಧವಾಗಿ ಪರಂಪರೆಯ ಜಾಡು ಹಿಡಿದವರಲ್ಲಿ ಹಿಂದೂ ಧರ್ಮದ ಅಧ್ವರ್ಯುಗಳಲ್ಲಿ ರಾಧಾಕಾಂತ ದೇವ ಹಾಗೂ ಆತನ 'ಧರ್ಮ ಸಭೆ' ಯೆಂಬ ಸಂಸ್ಥೆ ಪ್ರಮುಖವಾಗಿದ್ದವು.

ಭಾರತೀಯ ವಿದ್ಯಾ ಸಂಸ್ಥೆಗಳಲ್ಲಿ ಪಾಶ್ಚಿಮಾತ್ಯ ವಿದ್ಯೆ ಕೊಡಬೇಕೋ ಅಥವಾ ಪೌರ್ವಾತ್ಯ ಶಿಕ್ಷಣ ಒದಗಿಸಬೇಕೋ ಎಂಬ ವಿವಾದವು ಬಹುಮಟ್ಟಿಗೆ 1822 ರಿಂದ 1835 ರವರೆಗೆ ತೀಕ್ಷ್ಣವಾಗಿ ನಡೆಯಿತೆಂದು ಹೇಳಬಹುದು. ಈ ವಿವಾದವು 1835 ರಲ್ಲಿ ಬ್ರಿಟಿಷ್ ಸರ್ಕಾರವು ಮೆಕಾಲೆಯವರ ಪ್ರಸಿದ್ಧವಾದ 'ಬ್ರಿಟಿಷ್ ಸರ್ಕಾರದ ಮೂಲ ಉದ್ದೇಶ ಭಾರತೀಯ ಜನತೆಯಲ್ಲಿ ಯುರೋಪಿನ ಸಾಹಿತ್ಯ ಹಾಗೂ ವಿಜ್ಞಾನವನ್ನು ಪ್ರಸಾರಗೊಳಿಸುವ ಉದ್ದೇಶಹೊಂದಿರಬೇಕೆಂಬ' ಮಿನಿಟನ್ನು ಸ್ವೀಕರಿಸಿದ ನಂತರ ಕೊನೆಗೊಂಡಿತು ಎಂದು ಹೇಳಬಹುದು. ಕೊನೆಗೂ ಇಂಗ್ಲಿಷ್ ಶಿಕ್ಷಣದ ಪರವಾಗಿಯೇ ಅಂತಿಮ ನಿರ್ಧಾರ ಕೈಗೊಳ್ಳಲಾಯಿತು. ಈ ಐತಿಹಾಸಿಕವಾದ ವಿವಾದಗಳ ಧ್ವನಿ ಸಣ್ಣವನಿದ್ದಾಗಲೇ ಈಶ್ವರ ಚಂದ್ರರ ಕಿವಿಯಲ್ಲಿ ಪ್ರತಿಧ್ವನಿಸುತ್ತಿದ್ದಿತ್ತು ಮತ್ತು ಇವುಗಳು ಅವರ ವಿಚಾರ ಸರಣಿ ಹಾಗೂ ದೃಷ್ಟಿಯ ಮೇಲೆ ಬಹಳ ಪ್ರಭಾವ ಬೀರಿದವೆಂದು ಹೇಳಬಹುದು.

ಹೊಸದಾಗಿ ಮೂಡುತ್ತಿದ್ದ ಬೌದ್ಧಿಕ ಪರಂಪರೆಯ ವ್ಯತಿರಿಕ್ತವಾಗಿ ಈಶ್ವರ ಚಂದ್ರರಿಗೆ ಸಂಸ್ಕೃತ ಶಿಕ್ಷಣವನ್ನೇ ಕೊಡಿಸಲು ಠಾಕುರ್‌ದಾಸ್ ನಿರ್ಧರಿಸಿದರು. ಮನೆತನದ ಬಡತನದಿಂದಾಗಿ ವಂಶಪಾರಂಪರಾಗತವಾಗಿ 'ತೋಲ' ಮತ್ತು 'ಚತುಸ್ಪತಿ' ಗಳಲ್ಲಿ ಶಿಕ್ಷಕನಾಗುವ ಕನಸು ಠಾಕೂರ್‌ದಾಸರಿಗೆ ನನಸಾಗದೇ ಇದ್ದುದೂ ಸಹ ಇದಕ್ಕೆ ಕಾರಣವಾಗಿತ್ತು. ಈಶ್ವರ ಚಂದ್ರರು ಸಂಸ್ಕೃತ ಕಾಲೇಜನ್ನು ಸೇರಿ ಅಲ್ಲಿಯೇ ಅಭ್ಯಾಸ ಪೂರೈಸಬೇಕಾಯಿತು. ಅದೇ ಕಾಲೇಜಿನಲ್ಲಿ "ಹಿಂದೂ ಲಾ ಕಮಿಟಿ" ಪರೀಕ್ಷೆಗೆ ಅಭ್ಯಾಸ ಮಾಡಲು ಅವಕಾಶ ಮಾಡಲಾಗಿತ್ತು. ಆ ಪರೀಕ್ಷೆಯಲ್ಲಿ ಪಾಸಾದವರನ್ನು ನ್ಯಾಯಾಲಯಗಳಲ್ಲಿ ಹಿಂದೂ ಲಾ ಆಫೀಸರರೆಂದು ನೇಮಕ ಮಾಡುತ್ತಿದ್ದರು, ಆ ಪರೀಕ್ಷೆಗೆ ಅವರು ಕುಳಿತುಕೊಳ್ಳಬೇಕೆಂದು ನಿರ್ಣಯಿಸಲಾಯಿತು.

ಜೂನ್ 1829 ರಲ್ಲಿ ಸರ್ಕಾರಿ ಸಂಸ್ಕೃತ ಕಾಲೇಜಿನಲ್ಲಿ ಈಶ್ವರ ಚಂದ್ರರು ಪ್ರವೇಶ ಪಡೆದುಕೊಂಡರು. ಒಂದೇ ಕಟ್ಟಡದಲ್ಲಿ ಒಂದೆಡೆ ಸಂಸ್ಕೃತ ಕಾಲೇಜು ಇನ್ನೊಂದೆಡೆ ಹಿಂದೂ ಕಾಲೇಜು ಆಶ್ರಯ ಪಡೆದಿದ್ದವು. ಪಾಶ್ಚಿಮಾತ್ಯ ಹಾಗೂ

ಪೌರ್ವಾತ್ಯ ಶಿಕ್ಷಣ ಎರಡೂ ಪದ್ಧತಿಗಳ ಪ್ರತೀಕವೆಂಬಂತೆ, ಈ ಕಟ್ಟಡ ಕಂಗೊಳಿಸುತ್ತಿದ್ದಿತು. ಈ ಎರಡೂ ಕಟ್ಟಡಗಳ ನಡುವೆ ಸೇತುವೆ ನಿರ್ಮಿಸುವುದೇ ಈಶ್ವರ ಚಂದ್ರರ ಜೀವನಾದ್ಯಂತದ ಪರಿಶ್ರಮದ ಉದ್ದೇಶವಾಗಿದ್ದಿತು.

ಅಂದಿನ ಸಮಾಜ ಎಷ್ಟೊಂದು ಜಾತಿಯ ತಳಹದಿಯ ಮೇಲೆ ನಿರ್ಮಿತವಾಗಿತ್ತೆಂಬುದನ್ನು ಒಂದೇ ನಿದರ್ಶನದಿಂದ ಕಂಡುಕೊಳ್ಳಬಹುದು. ಸಂಸ್ಕೃತ ಕಾಲೇಜು ಬ್ರಾಹ್ಮಣ ಮತ್ತು ವೈದ್ಯ ಜಾತಿಗಳಿಗೆ ಮಾತ್ರ ಸೀಮಿತವಾಗಿತ್ತು. ಸಂಸ್ಕೃತ ಹಾಗೂ ಪುರಾತನ ಜ್ಞಾನ ಸಂಪತ್ತು ದ್ವಿಜರಿಗೆ ಮಾತ್ರ ಸಾಧ್ಯ ಹಾಗೂ ಲಭ್ಯ ಎಂಬ ಪರಂಪರಾಗತ ನಂಬಿಕೆ ಈ ತರಹದ ಕಟ್ಟಳೆಗೆ ಕಾರಣವಾಗಿದ್ದಿತ್ತು. ಆದರೆ ಹಿಂದೂ ಕಾಲೇಜಿನಲ್ಲಿ ಮುಸ್ಲಿಮ್ ಮತ್ತು ಕ್ರಿಶ್ಚಿಯನ್‌ರನ್ನುಳಿದು ಉಳಿದೆಲ್ಲ ಹಿಂದೂ ಜಾತಿಗಳಿಗೂ ಪ್ರವೇಶ ದೊರೆಯುತ್ತಿತ್ತು. ಇಷ್ಟು ಮಾತ್ರವಲ್ಲ, ಒಂದೇ ಕಟ್ಟಡದಲ್ಲಿ ಎರಡು ಭಾಗಗಳಲ್ಲಿ ನಿರ್ಮಿತವಾದ ಈ ಕಾಲೇಜುಗಳ ಮಧ್ಯ ಕಬ್ಬಿಣದ ಸಲಾಕೆಗಳನ್ನು ನಿಲ್ಲಿಸಲಾಗಿತ್ತು. ಬೌದ್ಧಿಕವಾಗಿ ಇವೆರಡರ ಮಧ್ಯೆ ಇದ್ದ ಬಿರುಕಿನ ಸಂಕೇತ ಎಂಬಂತೆ ಈ ಕಬ್ಬಿಣದ ಬೇಲಿ ಕಂಡುಬರುತ್ತಿತ್ತು. ಜ್ಞಾನಾರ್ಜನೆಗೆ ಈ ತರಹದ ನಿರ್ಬಂಧ, ಅದೂ ಜಾತಿಯ ತಳಹದಿಯ ಮೇಲೆ ಇದ್ದದ್ದನ್ನು ನೋಡಿ ಈಶ್ವರ ಚಂದ್ರರ ಮನಸ್ಸಿಗೆ ಬಹಳ ನೋವಾಯಿತು. ಅದಕ್ಕಾಗಿ ತಾವು ಸಂಸ್ಕೃತ ಕಾಲೇಜಿನ ಆಡಳಿತವನ್ನು ವಹಿಸಿಕೊಂಡ ಕೂಡಲೇ ಅವರು ಮಾಡಿದ ಮೊದಲನೇ ಕೆಲಸವೆಂದರೆ ಜಾತಿಯ ತಳಹದಿಯ ಮೇಲಿನ ಈ ನಿರ್ಬಂಧವನ್ನು ತೊಡೆದು ಹಾಕಿದ್ದು.

ಸಂಸ್ಕೃತ ಕಾಲೇಜಿನಲ್ಲಿ ಅವರಿದ್ದ ಹನ್ನೆರಡು ವರ್ಷಗಳ ವಿದ್ಯಾರ್ಥಿ ದೆಸೆಯಲ್ಲಿಯೂ ಈಶ್ವರ ಚಂದ್ರರು ಆರಂಭದಿಂದ ಕೊನೆಯವರೆಗೆ ಪ್ರತಿಭಾನ್ವಿತ ವಿದ್ಯಾರ್ಥಿಯೆನಿಸಿಕೊಂಡಿದ್ದರು. ಅವರು ಎಷ್ಟೋ ಬಹುಮಾನ, ಪ್ರಶಸ್ತಿಗಳನ್ನೂ, ವಿದ್ಯಾರ್ಥಿ ವೇತನಗಳನ್ನೂ ಪಡೆದರಲ್ಲದೇ ಸಂಸ್ಕೃತ ಗದ್ಯ ಹಾಗೂ ಪದ್ಯ ಕೃತಿಗಳಿಗೆ ಪಾರಿತೋಷಕಗಳನ್ನು ಪಡೆದರು. ಅವರು ಆಗಿನ ಕಾಲೇಜಿನಲ್ಲಿ ಕಲಿಸಲಾಗುತ್ತಿದ್ದ ಸರಳ ಇಂಗ್ಲಿಷ್ ಅಭ್ಯಾಸದಲ್ಲಿಯೂ ಉತ್ತಮ ರೀತಿಯಿಂದ ಪಾಸಾದರು. ಆದರೆ 1835 ರಲ್ಲಿ ಈ ಕಾಲೇಜಿನಲ್ಲಿ ಇಂಗ್ಲಿಷ್ ಕಲಿಸುವ ಪದ್ಧತಿಯನ್ನು ಪೂರ್ತಿಯಾಗಿ ಕೊನೆಗೊಳಿಸಿಬಿಟ್ಟರು. ಅದ್ದರಿಂದ ಈಶ್ವರ ಚಂದ್ರರಿಗೆ ಇಂಗ್ಲಿಷ್ ಅಭ್ಯಾಸ ಮುಂದುವರಿಸುವುದು ಅಸಾಧ್ಯವಾಯಿತು. ಅವರು ಹಲವು ಮಿತ್ರರೊಡಗೂಡಿ ಈ ಕಾಲೇಜಿನಲ್ಲಿ ಇಂಗ್ಲಿಷ್ ಅಭ್ಯಾಸ ಮರಳಿ ಆರಂಭಿಸಬೇಕೆಂದು ಅರ್ಜಿ ಸಲ್ಲಿಸಿದರು. ಇದು ಇಂಗ್ಲಿಷ್ ಅಭ್ಯಾಸದ ಬಗ್ಗೆ ಅವರಲ್ಲಿದ್ದ ಆಸಕ್ತಿಯ ನಿದರ್ಶನವಾಗಿದೆ.

ಆಗಿನ ಕಾಲದಲ್ಲಿದ್ದ ಚಿಕ್ಕಪ್ರಾಯದಲ್ಲಿ ಮದುವೆ ಮಾಡುವ ಪದ್ಧತಿಗನುಗುಣವಾಗಿ ಅವರು ತಮ್ಮ ಹದಿನಾಲ್ಕನೇ ವರ್ಷದಲ್ಲಿ ದಿನಮಯಿ ದೇವಿಯವರನ್ನು

ಮದುವೆಯಾದರು. ಅವರ ಚರಿತ್ರೆಕಾರರಾದ ಚಂಡೀ ಚರಣ ಬಂದೋಪಾಧ್ಯಾಯರ ಅಭಿಪ್ರಾಯದ ಪ್ರಕಾರ ಈಶ್ವರ ಚಂದ್ರರಿಗೆ ಇಷ್ಟು ಸಣ್ಣ ವಯಸ್ಸಿನಲ್ಲಿ ಮದುವೆಯಾಗಲು ಮನಸ್ಸಿರಲಿಲ್ಲ. ಅವರು ತಮ್ಮ ಜೀವನವನ್ನು ಶಿಕ್ಷಣ ಹಾಗೂ ಸಾಮಾಜಿಕ ಕಾರ್ಯಗಳಿಗೆ ಮುಡುಪಾಗಿಡಬೇಕೆಂಬುದು ಅವರ ಹಂಬಲವಾಗಿದ್ದಿತ್ತು. ಅಸ್ಪಷ್ಟವಾಗಿಯಾದರೂ, ತಮ್ಮ ಜೀವನದ ಉದ್ದೇಶವೇನಾಗಿರಬೇಕೆಂಬುದರ ಕಲ್ಪನೆ ಅವರ ಎಳೆ ಮನಸ್ಸಿನಲ್ಲಿಯೇ ರೂಪಗೊಂಡಿತ್ತೆಂಬಂತೆ ತೋರುತ್ತದೆ. ಆದರೆ ಅವರ ತಂದೆಯ ಮಾತಿಗೆ ಬೆಲೆಕೊಟ್ಟು ಅವರು ಮದುವೆಯಾಗಲು ಒಪ್ಪಿಕೊಂಡರು.

ಈಶ್ವರ ಚಂದ್ರರು ಮೂರು ವರ್ಷಗಳ ಕಾಲ ವ್ಯಾಕರಣ ಅಭ್ಯಾಸದಲ್ಲಿದ್ದರು. ಸಂಸ್ಕೃತ ವ್ಯಾಕರಣದಲ್ಲಿ ನೈಪುಣ್ಯತೆ ಪಡೆಯುವುದು ಎಂತಹ ಕಷ್ಟದ ಕೆಲಸ ಎಂಬುದು ಬುದ್ಧಿವಂತರಾದ ವಿದ್ಯಾಸಾಗರರಿಗೂ ಮನವರಿಕೆಯಾಗಿರಬೇಕು. ಆದರೂ ಅವರು ಅದನ್ನು ಬಹಳ ಯಶಸ್ವಿಯಾಗಿ ಮುಗಿಸಿದರು. ಅವರು ಒಂದೊಂದಾಗಿ ವ್ಯಾಕರಣ, ಸಾಹಿತ್ಯ, ಅಲಂಕಾರ, ವೇದಾಂತ, ಸ್ಮೃತಿ, ನ್ಯಾಯ, ತರ್ಕ, ಜ್ಯೋತಿಷ ಮತ್ತು ಧರ್ಮಶಾಸ್ತ್ರಗಳ ಅಭ್ಯಾಸ ಮುಗಿಸಿ ತಮ್ಮ ಅಧ್ಯಯನವನ್ನು ಉನ್ನತ ಮಟ್ಟದ ಪರಿಣಾಮದೊಂದಿಗೆ ಪೂರೈಸಿದರು. ಈ ಕಾಲದಲ್ಲಿ ಅವರಿಗೆ ಮನೆಯಲ್ಲಿಯೂ ತುಂಬ ಕೆಲಸ. ಅವರ ತಂದೆಗೆ ಮನೆ ಕೆಲಸಕ್ಕೆ ಆಳುಗಳನ್ನು ಇಟ್ಟುಕೊಳ್ಳಲು ಸಾಧ್ಯವಿರಲಿಲ್ಲ ಮತ್ತು ಆ ಕಾಲದಲ್ಲಿ ಈಶ್ವರ ಚಂದ್ರ ಹಾಗೂ ಅವರ ತಂದೆಯವರೊಂದಿಗೆ ಮನೆಯಲ್ಲಿ ಅನೇಕರು ವಾಸವಾಗಿದ್ದರು. ಈಶ್ವರ ಚಂದ್ರರು ಅಡಿಗೆ ಮಾಡಬೇಕಾಗುತ್ತಿತ್ತು. ಪಾತ್ರೆಗಳನ್ನು ತೊಳೆಯಬೇಕಾಗುತ್ತಿತ್ತು ಮತ್ತು ಇತರ ಮನೆಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಅವೆಲ್ಲವುಗಳ ಜೊತೆಗೆ ಅವರ ತಂದೆಯ ತೀಕ್ಷ್ಣ ಹಾಗೂ ಕಟ್ಟುನಿಟ್ಟಿನ ಮೇಲ್ವಿಚಾರಣೆಯಲ್ಲಿ ಕಷ್ಟಪಟ್ಟು ಓದಬೇಕಾಗುತ್ತಿತ್ತು. ಠಾಕೂರದಾಸರು ಮಗನ ವಿದ್ಯಾಭ್ಯಾಸದ ಬಗ್ಗೆ ಎಷ್ಟೊಂದು ಆಸಕ್ತರಾಗಿದ್ದರೆಂದರೆ ಪ್ರಸಂಗ ಬಂದಾಗ ಅವರನ್ನು ಅಭ್ಯಾಸದಲ್ಲಿ ತೊಡಗಿಸಲು ನಿರ್ದಯವಾಗಿ ಹೊಡೆಯಲೂ ಅವರು ಹಿಂದು ಮುಂದು ನೋಡುತ್ತಿರಲಿಲ್ಲ. ಅವರು ತಿಂದ ಈ ಹೊಡೆತಗಳೇ ಅವರ ಮುಂದಿನ ಜೀವನದಲ್ಲಿ ಮಕ್ಕಳಿಗೆ ಇಂಥ ದೈಹಿಕ ಶಿಕ್ಷೆಯನ್ನು ವಿರೋಧಿಸುವ ಪ್ರವೃತ್ತಿ ಬೆಳೆಯಲು ಕಾರಣವಾಗಿರಬೇಕೆಂದು ತೋರುತ್ತದೆ.

ಈಶ್ವರ ಚಂದ್ರರಿಗೆ ಜೀವನ ಒಂದು ಸುಖದ ಸುಪ್ಪತ್ತಿಗೆಯಾಗಿರಲಿಲ್ಲ, ಅವರದು ಕಷ್ಟಮಯವಾದ ಹಾಗೂ ಹೋರಾಟದ ಬದುಕಾಗಿತ್ತು. ಅವರ ಆ ಕರಾಳ ಜೀವನದಲ್ಲಿ ಕಾಣುವ ಒಂದೇ ಸುವರ್ಣರೇಖೆಯೆಂದರೆ ಅವರಲ್ಲಿ ಅಡಗಿದ್ದ ಮಹತ್ವಾಕಾಂಕ್ಷೆ ಹಾಗೂ ಮುಂದಿನ ಜೀವನದ ಬಗ್ಗೆ ಅವರಲ್ಲಿದ್ದ ಆಶಾ ಭಾವನೆ.

ಏಪ್ರಿಲ್ 1839 ರಲ್ಲಿ ಈಶ್ವರ ಚಂದ್ರರು "ಹಿಂದೂ ಲಾ ಕಮಿಟ" ಪರೀಕ್ಷೆಗೆ ಕುಳಿತುಕೊಂಡು ತೇರ್ಗಡೆ ಹೊಂದಿದರು. ಆದ್ದರಿಂದ ಯುರೋಪಿಯನ್ ನ್ಯಾಯಾಧೀಶರಿಗೆ ಹಿಂದೂ ಕಾಯಿದೆ ವಿಷಯಗಳಲ್ಲಿ ಸಲಹೆ ನೀಡುವ ಅಧಿಕಾರವುಳ್ಳ

"ಹಿಂದೂ ಲಾ ಆಫೀಸರ್ ಅಥವಾ ಹಿಂದೂ ಜಡ್ಜ ಪಂಡಿತರೆಂಬ" ಹುದ್ದೆಗೆ ನೇಮಕಗೊಳ್ಳುವ ಅರ್ಹತೆ ಪಡೆದರು. ತದನಂತರ ತಿಪ್ಪೆರಾ ಜಿಲ್ಲೆಯಲ್ಲಿ ಜಡ್ಜ ಪಂಡಿತರ ಕೆಲಸ ದೊರಕಿತು. ಆದರೆ ಸಂಸ್ಕೃತ ಕಾಲೇಜಿನಲ್ಲಿ ಅಭ್ಯಾಸವನ್ನು ಇನ್ನೂ ಪೂರ್ತಿಯಾಗಿರದಿದ್ದರಿಂದ ಅವರ ತಂದೆಯ ಇಚ್ಛೆಗೆ ಅನುಗುಣವಾಗಿ ಆಹ್ವಾನವನ್ನು ಸ್ವೀಕರಿಸಲಿಲ್ಲ. ಹಿಂದೂ ಲಾ ಪರೀಕ್ಷಕರ ಸಮಿತಿಯವರು ಅವರಿಗೆ ಪದವಿ ಪ್ರದಾನ ಮಾಡುವಾಗ ಅವರ ಸರ್ಟಿಫಿಕೇಟಿನಲ್ಲಿ ಅವರಿಗೆ "ವಿದ್ಯಾಸಾಗರ" ಎಂಬ ಅಭಿಧಾನವನ್ನಿತ್ತು ಗೌರವಿಸಿದರು. ಈ ಗೌರವದ ಅಭಿಧಾನ ಮುಂದೆ ದೇಶದಾದ್ಯಂತ ಪ್ರಚಾರವಾಯಿತು. ಕಾಲಾವಧಿಯಲ್ಲಿ ಅವರ ಜನ್ಮನಾಮಕ್ಕಿಂತ ಅವರ ವಿದ್ವತ್ತನ್ನು ಸಾರುವ ಅಭಿಧಾನದ ಹೆಸರಿನಿಂದಲೇ ಅವರು ಪ್ರಖ್ಯಾತಿಯನ್ನು ಪಡೆದರು.

1841 ರ ಡಿಸೆಂಬರ್ ತಿಂಗಳಲ್ಲಿ ಸಂಸ್ಕೃತ ಕಾಲೇಜಿನಲ್ಲಿ ಸಂಸ್ಕೃತ ಶಿಕ್ಷಣದ ವಿವಿಧ ವಿಭಾಗಗಳಲ್ಲಿ ಪದವಿ ಪ್ರಶಸ್ತಿಗಳನ್ನು ಪಡೆದು ಅಲ್ಲಿಯ ಅಭ್ಯಾಸಕ್ರಮವನ್ನು ಪೂರೈಸಿದರು.

ಮನಷ್ಯನ ಪ್ರಾರಂಭಿಕ ದಿನಗಳು ಅವನ ಭವಿಷ್ಯತ್ತಿನ ಮೇಲೆ ಬಹಳ ಪ್ರಭಾವ ಬೀರುತ್ತವೆ. ಇದು ವಿದ್ಯಾಸಾಗರರ ಜೀವನದ ಬಗೆಗಂತೂ ಅಕ್ಷರಶಃ ನಿಜವಾದುದು. ಆಗಿನ ಕಾಲದ ಬೌದ್ಧಿಕ ಹಾಗೂ ನೈತಿಕ ತಾಕಲಾಟ ಹಾಗೂ ತೊಳಲಾಟದ ಬಗೆಗೆ ಆಗಲೇ ವಿವರಿಸಲಾಗಿದೆ. ಪಾಶ್ಚಿಮಾತ್ಯ ಜ್ಞಾನದ ಪರಿಣಾಮವಾಗಿ ನಮ್ಮ ಪರಂಪರಾಗತವಾದ ಸಾಮಾಜಿಕ ಕಟ್ಟುನಿಟ್ಟಿನ ನಿಲುಮೆಗಳಲ್ಲಿ ಬಿರುಕುಗಳು ತೋರಲಾರಂಭಿಸಿದ್ದವು. ಸುಧಾರಣೆ ಹಾಗೂ ಕ್ರಾಂತಿಯ ಮಾತುಗಳು ಎಲ್ಲೆಡೆ ಕೇಳತೊಡಗಿದ್ದವು. ಇದರ ವಿರುದ್ಧವಾಗಿ ಪರಂಪರೆಗೆ ಬದ್ಧವಾದ ಹಿಂದು ವಿಚಾರ ಸರಣಿಯ ಭದ್ರಕೋಟೆ ಎದುರಿಗೆ ನಿಂತಂತಿತ್ತು. ಮುಖ್ಯವಾಗಿ ಸಮಾಜದಲ್ಲಿ ಮೂರು ತರಹದ ವಿಚಾರಣಾ ಸರಣಿ ತಲೆದೋರುತ್ತಿದ್ದವು. ಅವೆಂದರೆ:
(1) ಪಾಶ್ಚಿಮಾತ್ಯ ಸಂಸ್ಕೃತಿಗೆ ವ್ಯಾಮೋಹವುಳ್ಳ ಗುಂಪು. (2) ಸುಧಾರಣೆಯ ಮಾಧ್ಯಮ ಗುಂಪು. (3) ಇವೆರಡನ್ನೂ ಒಪ್ಪದ ಕಟ್ಟುನಿಟ್ಟಾದ ಧಾರ್ಮಿಕ ಪರಂಪರೆಗೆ ಅಂಟಿಕೊಂಡ ಮೂರನೆಯ ಗುಂಪು. ಆಗಿನ ಕಾಲದ ಅನೇಕ ಬುದ್ಧಿವಂತರೊಡನೆ ವಿದ್ಯಾಸಾಗರರೂ ಈ ಪರಿಸ್ಥಿತಿಯನ್ನು ಎದುರಿಸಿದರು. ಅವರು ಮಧ್ಯಮ ಮಾರ್ಗವನ್ನೇ ಅನುಸರಿಸಿದರು. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿಯ ಶ್ರೇಷ್ಠವಾದ ಮೌಲ್ಯಗಳು ಈ ದೇಶದ ಸಾಂಸ್ಕೃತಿಕ ಪರಂಪರೆಯ ಪ್ರವಾಹದಲ್ಲಿ ಬೆರೆಯಲು ಅಣಿವು ಮಾಡುವುದೇ ಈ ಮಧ್ಯಮ ಮಾರ್ಗವಾಗಿತ್ತು.

# 2. ಪ್ರತಿಭೆಯ ಅರಳುವಿಕೆ

ಶಿಕ್ಷಕರ ಜೀವನವನ್ನು ವಿದ್ಯಾಸಾಗರರು ಆರಂಭಿಸಿದರು. ಅವರು ರಾಜಕಾರಣಿ ಆಗಿರದೆ ಜನರ ನೈತಿಕ ಜೀವನವನ್ನು ಮೇಲೆತ್ತಲು ಪ್ರಯತ್ನಿಸಿದರು. ಇದಕ್ಕೆ ಅವರು ಆರಿಸಿಕೊಂಡದ್ದು ಶಿಕ್ಷಕನ ಮಾಧ್ಯಮ.

1841 ರಲ್ಲಿ ವಿದ್ಯಾಸಾಗರರು ಫೋರ್ಟ್ ವಿಲಿಯಂ ಕಾಲೇಜಿನಲ್ಲಿ ಬಂಗಾಲಿ ಭಾಷೆಯಲ್ಲಿ ಶಿರಸ್ತೆದಾರ ಅಥವಾ ಹೆಡ್‌ಪಂಡಿತರೆಂದು ಸೇರಿದರು. 1800 ರಲ್ಲಿ "ಮಾರ್ಕ್ವಿಸ್ ಅಫ್ ವೆಲ್ಲಸ್ಲಿ" ಯಿಂದ ಆರಂಭಿಸಲ್ಪಟ್ಟ ಈ ಕಾಲೇಜು, ಬಂಗಾಲಿ ಭಾಷೆ ಮತ್ತು ಸಾಹಿತ್ಯಗಳ ಬೆಳವಣಿಗೆಗೆ ಹಾಗೂ ಪಾಶ್ಚಿಮಾತ್ಯ ಹಾಗೂ ಪೌರ್ವಾತ್ಯ ದೇಶಗಳ ಮಧ್ಯ ಸಂಪರ್ಕ ಕಲ್ಪಿಸುವ ಈ ಎರಡೂ ದಿಸೆಯಲ್ಲಿ ಮಹತ್ವದ ಪಾತ್ರ ಹೊಂದಿದ ಸಂಸ್ಥೆಯಾಗಿದ್ದಿತು. ಕಂಪೆನಿಯ ತರುಣ ನೌಕರರಿಗೆ ಪಾಶ್ಚಾತ್ಯ ಭಾಷೆಗಳನ್ನು ಕಲಿಸುವುದಕ್ಕಾಗಿ ಈ ಕಾಲೇಜನ್ನು ಆರಂಭಿಸಲಾಗಿತ್ತು. ಪೌರ್ವಾತ್ಯ ಭಾಷೆಗಳನ್ನು ಪ್ರತಿನಿಧಿಸುವ, ಅದರಲ್ಲಿಯೂ ಬಂಗಾಲಿ ಭಾಷೆಗೆ ವಿಶೇಷ ಕೊಡುಗೆಗಳನ್ನು ನೀಡುವ ಅನೇಕ ವಿದ್ವಾಂಸರು ಹಾಗೂ ಬರಹಗಾರರನ್ನು ಈ ಸಂಸ್ಥೆ ಕೂಡಿಹಾಕಿತ್ತು. ಇವರು ತಮ್ಮ ಇಬ್ಬಗೆಯ ಕಾರ್ಯಕಲಾಪಗಳಿಂದ ಪಾಶ್ಚಿಮಾತ್ಯರ ಉದಾರವಾದ ವಿಚಾರ ಸ್ವಾತಂತ್ರ್ಯವನ್ನು ತಾವು ಅಳವಡಿಸಿಕೊಳ್ಳುವುದರ ಜೊತೆಗೆ ಯುರೋಪಿಯನ್ ತರುಣರಿಗೆ ಪೌರ್ವಾತ್ಯ ಸಾಹಿತ್ಯ ಹಾಗೂ ತತ್ವಜ್ಞಾನಗಳ ವೈಭವದ ಪರಿಚಯ ಮಾಡಿಕೊಡುತ್ತಿದ್ದರು.

ಫೋರ್ಟ್ ವಿಲಿಯಂ ಕಾಲೇಜಿನಲ್ಲಿ ಅವರು ಅನೇಕ ಇಂಗ್ಲಿಷ್ ಮಹನೀಯರ ಮೆಚ್ಚುಗೆಗೆ ಪಾತ್ರರಾದರು. ಅದರಲ್ಲಿಯೂ ಕಾಲೇಜಿನ ಕಾರ್ಯದರ್ಶಿಯಾದ ಜಿ.ಟಿ.ಮಾರ್ಷಲ್ ವಿದ್ಯಾಸಾಗರರನ್ನು ಬಹುವಾಗಿ ಮೆಚ್ಚಿಕೊಂಡರು. ಅವರು ಹೇಳಿದಂತೆ "ಈ ಮೇಧಾವಿಯೊಂದಿಗೆ ಹೆಚ್ಚು ಹೆಚ್ಚು ಸಂಬಂಧ ಬಂದಷ್ಟೂ ಅವರ ತೀಕ್ಷ್ಣ ಬುದ್ಧಿಶಕ್ತಿ, ಅಪಾರ ಜ್ಞಾನ, ಹಿಡಿದ ಕೆಲಸದಲ್ಲಿ ತೋರುತ್ತಿದ್ದ ಧೈರ್ಯ ಮತ್ತು ಛಲ ಹಾಗೂ ವಿಶ್ರಾಂತಿಯಿಲ್ಲದ ದುಡಿಮೆ, ಅವೆಲ್ಲಕ್ಕೂ ಹೆಚ್ಚಾಗಿ ಅವರ ನಿಷ್ಕಳಂಕವಾದ ಚಾರಿತ್ರ್ಯ ಇವುಗಳಿಂದ ಪ್ರಭಾವಿತರಾಗುತ್ತಿದ್ದರು." ಕ್ಯಾಪ್ಟನ್ ಮಾರ್ಷಲ್‌ರಿಂದ ಪ್ರೇರಿತರಾಗಿ ವಿದ್ಯಾಸಾಗರರು ಹಿಂದಿ ಹಾಗೂ ಇಂಗ್ಲಿಷ್ ಅಭ್ಯಾಸ ಆರಂಭಿಸಿದರು. ಇಂಗ್ಲಿಷ್ ಅಭ್ಯಾಸದ ಹುಚ್ಚು ಅವರ ಮುಪ್ಪಿನ ವಯಸ್ಸಿನಲ್ಲಿಯೂ ಅವರನ್ನು ಬಿಡಲಿಲ್ಲವೆಂದು ತೋರುತ್ತದೆ. ಶಿಕ್ಷಣ ಹಾಗೂ

ಪರಂಪರೆಯಿಂದ ಸಂಸ್ಕೃತದಲ್ಲಿದ್ದ ಸ್ವಾಭಾವಿಕವಾದ ಪ್ರೇಮ ಪರದೇಶದ ಭಾಷೆಯಾದ ಇಂಗ್ಲಿಷ್ ಬಗ್ಗೆ ಅವರಲ್ಲಿ ದ್ವೇಷವನ್ನು ಎಂದೂ ಹುಟ್ಟಿಸಲಿಲ್ಲ. ಅದಕ್ಕೆ ವ್ಯತಿರಿಕ್ತವಾಗಿ ಯುರೋಪಿಯನ್ ಕೊಡುಗೆಯಿಂದ ಒದಗಿದ ಸಮೀಪದ ಸಂಪರ್ಕ ಅವರ ಮಾನಸಿಕ ಕ್ಷಿತಿಜವನ್ನು ವಿಶಾಲಗೊಳಿಸಿತಲ್ಲದೆ ಅವರಲ್ಲಿ ಸ್ವಭಾವಜನ್ಯವಾದ ಸುಧಾರಣೆ, ಬದಲಾವಣೆ ಹಾಗೂ ಉತ್ಸಾಹವನ್ನು ಕುದುರಿಸಿತು.

ಏಪ್ರಿಲ್ 1848 ರಲ್ಲಿ ತಮ್ಮ ಬಾಲ್ಯದ ವಿದ್ಯಾಸಂಸ್ಥೆಯಾದ ಸಂಸ್ಕೃತ ಕಾಲೇಜಿನಲ್ಲಿಯೇ ತಿಂಗಳಿಗೆ 50 ರೂಪಾಯಿ ಪಗಾರದ ಮೇಲೆ ಅಸಿಸ್ಟೆಂಟ್ ಸೆಕ್ರೆಟರಿಯಾಗಿ ನೇಮಿಸಲ್ಪಟ್ಟರು. ಮಾರ್ಷಲ್ಲರು ಕೊಟ್ಟ ಪ್ರಶಸ್ತಿ ಪತ್ರಿಕೆಯಲ್ಲಿ ವಿದ್ಯಾಸಾಗರರ ಜಾಣ್ಮೆ, ಬುದ್ಧಿಮತ್ತೆ ಹಾಗೂ ಯಾವ ದುರಾಗ್ರಹ ದುಷ್ಟತನದ ಲವಲೇಶವೂ ಇಲ್ಲದ ಸ್ವಭಾವದ ಬಗ್ಗೆ ಮೆಚ್ಚಿಕೆ ವ್ಯಕ್ತಪಡಿಸಲಾಗಿತ್ತು. ಸಂಸ್ಕೃತ ಕಾಲೇಜಿನಲ್ಲಿ ತಮ್ಮ ಸ್ಥಾನ ಕೊನೆಯವರೆಗೆ ಭದ್ರವಾಗಿರಲಾರದೆಂದು ಮುಂದಾಲೋಚನೆಯಿಂದಲೋ ಏನೋ ಅವರು ಫೋರ್ಟ್ ವಿಲಿಯಂ ಕಾಲೇಜಿನ ತಮ್ಮ ಸ್ಥಾನದಲ್ಲಿ ತನ್ನ ತಮ್ಮ ದೀನಬಂಧು ನ್ಯಾಯರತ್ನ ಅವರನ್ನು ನೇಮಿಸುವಂತೆ ನೋಡಿಕೊಂಡಿದ್ದರು. ಒಂದು ವೇಳೆ ಸಂಸ್ಕೃತ ಕಾಲೇಜಿನ ಅಧಿಕಾರಿಗಳೊಂದಿಗೆ ಏನಾದರೂ ಭಿನ್ನಾಭಿಪ್ರಾಯ ಉಂಟಾಗಿ ತೊಂದರೆಯಾದರೆ, ಅವರ ತಮ್ಮನ ಆದಾಯ ಮನೆತನದ ಖರ್ಚಿಗೆ ಒದಗುವುದರ ಬಗೆಗೆ ಅವರು ಖಾತ್ರಿ ಮಾಡಿಕೊಂಡಿದ್ದರು. ಕೊನೆಗೆ ಅದು ಹಾಗೆಯೇ ಆಯಿತು.

ಹಳೆಯ ಪರಂಪರೆಯ ಜಾಡಿನಲ್ಲಿ ಬಿದ್ದು ತೊಳಲಾಡುತ್ತಿದ್ದ ಸಂಸ್ಕೃತ ಶಿಕ್ಷಣ ಪದ್ಧತಿಯನ್ನು ಸುಧಾರಿಸಬೇಕೆಂದು ಹಂಬಲಿಸುತ್ತಿದ್ದ ಈಶ್ವರ ಚಂದ್ರರು ಅದಕ್ಕಾಗಿ ಒಂದು ಯೋಜನೆಯನ್ನು ತಯಾರಿಸಿ, ಸಂಸ್ಕೃತ ಕಾಲೇಜಿನ ಸೆಕ್ರೆಟರಿಯಾದ ರಸಮಯದತ್ತ ಅವರಿಗೆ ಸಲ್ಲಿಸಿದರು. ಈ ಯೋಜನೆಯನ್ನು ಸ್ವತಃ ಮಾರ್ಷಲ್‌ರೇ ಶಿಫಾರಸು ಮಾಡಿದ್ದರು. ಆದರೆ ಕೆಳಗಿನ ಅಧಿಕಾರಿ ತಯಾರಿಸಿದ ಯೋಜನೆಯನ್ನು ಕಾರ್ಯಗತಗೊಳಿಸಲು ಅವರ ಮನಸ್ಸು ಒಪ್ಪಲಿಲ್ಲವೆಂದು ತೋರುತ್ತದೆ. ಅದರಲ್ಲಿಯ ಸ್ವಲ್ಪ ಅಂಶಗಳ ಹೊರತಾಗಿ ಬೇರೆ ಯಾವ ಶಿಫಾರಸನ್ನೂ ಅವರು ಕಾರ್ಯಗತಗೊಳಿಸಲಿಲ್ಲ.

ಈ ಹೊಸ ಯೋಜನೆಯನ್ನು ತಯಾರಿಸುವಾಗ ವಿದ್ಯಾಸಾಗರರ ಮನಸ್ಸಿನಲ್ಲಿದ್ದ ವಿಚಾರವೆಂದರೆ, ಸಂಸ್ಕೃತ ಶಿಕ್ಷಣ ಇಂಗ್ಲಿಷ್ ಶಿಕ್ಷಣದೊಂದಿಗೆ ಸಮೀಕರಿಸಿ ಆ ಶಿಕ್ಷಣ ಪಡೆದ ಸ್ನಾತಕರು ಶೈಕ್ಷಣಿಕ ಕ್ಷೇತ್ರದಲ್ಲಿ ಉಪಯುಕ್ತವಾದ ಸೇವೆ ಸಲ್ಲಿಸುವಂತೆ ಅವರನ್ನೆಲ್ಲ ತರಬೇತಿಗೊಳಿಸುವುದೇ ಆಗಿತ್ತು. ಕಾರ್ಯದರ್ಶಿಯ ಉದ್ದೇಶಪೂರ್ವಕವಾದ ಈ ನಿರಾಸಕ್ತಿ ಅವರಿಗೆ ತೀರಾ ನಿರಾಶೆಯನ್ನು ಉಂಟುಮಾಡಿತು. ತನ್ನ ಉದ್ದೇಶಿತ ಕಾರ್ಯದಲ್ಲಿ ವಿರೋಧವನ್ನು ಅನುಭವಿಸಿದ್ದು ಅವರ ಜೀವನದಲ್ಲಿ ಇದೇ ಮೊದಲನೇ ಬಾರಿಯಾಗಿದ್ದಿತು. ಅದು ಅವರ ಸ್ವಭಾವಸಹಜವಾದ ಫಲವನ್ನು

ಹೊರಹೊಮ್ಮಿಸಿತು. ತನ್ನ ವಿದ್ಯಾಸಂಸ್ಥೆಗೆ ಉಪಯುಕ್ತವಾದ ಯಾವ ಸೇವೆಯನ್ನೂ ಸಲ್ಲಿಸಲು ಸಾಧ್ಯವಾಗದಿದ್ದರೆ, ಕೇವಲ ಉಪಜೀವನ ನಿರ್ವಹಣೆಗಾಗಿ ಅಂತಹ ಕೆಲಸದಲ್ಲಿ ಮುಂದುವರಿಯಲು ಅವರಿಗೆ ಮನಸ್ಸಾಗಲಿಲ್ಲ. ಆದ್ದರಿಂದ ತಮ್ಮ ಸ್ನೇಹಿತ ಹಾಗೂ ಹಿತಚಿಂತಕರಿಂದ ಸಲಹೆಯನ್ನು ಕಡೆಗಣಿಸಿ, 1847 ಜುಲೈ ತಿಂಗಳಿನಲ್ಲಿ ತಮ್ಮ ಕೆಲಸಕ್ಕೆ ವಿದ್ಯಾಸಾಗರರು ರಾಜಿನಾಮೆಯನ್ನಿತ್ತರು. ಆಗಿನ ದಿನಗಳಲ್ಲಿ ತಿಂಗಳಿಗೆ 50 ರೂಪಾಯಿ ಸಿಗುವ ನೌಕರಿಯನ್ನು ಬಿಟ್ಟುಕೊಡುವುದೆಂದರೆ, ಅದಕ್ಕೆ ಬಹು ದೊಡ್ಡ ನೈತಿಕ ಧೈರ್ಯದ ಬೆಂಬಲವಿರಬೇಕಾಗಿತ್ತು. ಈ ನೌಕರಿಯನ್ನು ಕಳೆದುಕೊಂಡು ಈಶ್ವರ ಚಂದ್ರರು ಹೇಗೆ ಉಪಜೀವನ ನಿರ್ವಹಿಸುವರೆಂಬ ಬಗ್ಗೆ ಅನೇಕರು ಆಶ್ಚರ್ಯಪಟ್ಟರು. ತಾವು ಕಾಯಿಪಲ್ಲೆ ಮಾರಿ ಉಪಜೀವನ ಮಾಡಬಲ್ಲೆವೆಂದು ಉತ್ತರ ಕೊಟ್ಟರು. ವಿದ್ಯಾಸಾಗರರದು ಅಂತಹ ಅದಮ್ಯವಾದ ಚೇತನ.

ಈ ನಿರುದ್ಯೋಗದ ಪರಿಸ್ಥಿತಿಯನ್ನು ವಿದ್ಯಾಸಾಗರರು ಅತ್ಯಂತ ಧೈರ್ಯ ಹಾಗೂ ಸಮಾಧಾನದಿಂದ ಎದುರಿಸಿದರು. ಹಲವಾರು ಬಂಧುಗಳು ವಾಸವಾಗಿದ್ದ ಮನೆತನದ ಖರ್ಚನ್ನು ಅವರು ನಿಭಾಯಿಸಬೇಕಾಗಿತ್ತು. ಇದಲ್ಲದೆ ಬೇಗನೆ ನಿವೃತ್ತಿ ಪಡೆಯುವಂತೆ ಮನವೊಲಿಸಿ ಈಗ ತಮ್ಮ ಹಳ್ಳಿಯಲ್ಲಿ ವಾಸವಾಗಿದ್ದ ತಮ್ಮ ತಂದೆಗೂ ಪ್ರತಿ ತಿಂಗಳು ಸ್ವಲ್ಪ ಹಣ ಕಳುಹಿಸಿಕೊಡಬೇಕಾಗುತ್ತಿತ್ತು. ಆದರೆ ವಿದ್ಯಾಸಾಗರರು ಧೃತಿಗೆಡಲಿಲ್ಲ. ಇಂತಹ ಪ್ರಸಂಗ ಬರಬಹುದೆಂದು ಊಹಿಸಿಯೋ ಏನೋ, ಅಥವಾ ತಮ್ಮ ಸಾಹಿತ್ಯದ ತಯಾರಿಗಾಗಿಯೋ ಏನೋ ತಮ್ಮ ಗೆಳೆಯರಾದ ಮದನ್‌ಮೋಹನ್ ತರ್ಕಾಲಂಕಾರ ಎಂಬುವರೊಂದಿಗೆ ಸಂಸ್ಕೃತ ಪ್ರೆಸ್ ಎಂಬ ಮುದ್ರಣಾಲಯವನ್ನು ಆರಂಭಿಸಿದ್ದರು. ಫೋರ್ಟ್ ವಿಲಿಯಂ ಕಾಲೇಜಿನಲ್ಲಿ ಉಪಯೋಗಿಸಲು ಒಂದು ಒಳ್ಳೆಯ ಬಂಗಾಲಿ ಪಠ್ಯಪುಸ್ತಕದ ಅವಶ್ಯಕತೆ ಇದ್ದಿತು. ಈ ಬೇಡಿಕೆಯನ್ನು ಪೂರೈಸುವುದಕ್ಕಾಗಿ ಈಶ್ವರ ಚಂದ್ರರು "ಬೇತಲ್ ಪಂಚವಿಂಶತ್" ಎಂಬ ಪಠ್ಯಪುಸ್ತಕವನ್ನು ಬರೆದಿದ್ದರು. ಅವರ ಈ ಮೊದಲನೇ ಪಠ್ಯಪುಸ್ತಕ ಹೊರಬಂದದ್ದು ಇದೇ ಸಮಯದಲ್ಲಿ. ವಿದ್ಯಾಸಾಗರರು ತಾವೇ ತಂದುಕೊಂಡ ನಿರುದ್ಯೋಗ ತನ್ನಷ್ಟಕ್ಕೆ ತಾನೆ 1849 ರಲ್ಲಿ ಕೊನೆಗೊಂಡಿತು. ಅವರು ಮತ್ತೆ "ಫೋರ್ಟ್ ವಿಲಿಯಂ" ಕಾಲೇಜಿನಲ್ಲಿ ಈ ಸಲ ಹೆಡ್ ರಾಯಟರ್ ಮತ್ತು ಟ್ರೇಜರರ್ ಎಂದು ನೇಮಕಗೊಂಡರು.

ಕೆಲವು ಸಮಯದ ನಂತರ ತಮ್ಮ ವಿದ್ಯಾ ಸಂಸ್ಥೆಗೆ ತಿರುಗಿ ಹೋಗಲು ಅವರಿಗೆ ಮತ್ತೆ ಅವಕಾಶ ದೊರೆಯಿತು. ಇದು ಅವರ ಜೀವನಕ್ಕೆ ಬಹು ದೊಡ್ಡ ತಿರುವನ್ನು ಒದಗಿಸಿತು. ಇಷ್ಟರಲ್ಲಿ ಸಂಸ್ಕೃತ ಪ್ರಾಧ್ಯಾಪಕರ ಹುದ್ದೆ ಖಾಲಿ ಬಿದ್ದಿತು. ಕೌನ್ಸಿಲ್ ಆಫ್ ಎಜ್ಯೂಕೇಶನ್‌ದ ಕಾರ್ಯದರ್ಶಿಗಳೂ ವಿದ್ಯಾಸಾಗರರನ್ನು ಬಹುವಾಗಿ ಮೆಚ್ಚಿಕೊಂಡವರೂ ಆದ ಡಾ. ಎಫ್.ಜಿ.ಮೊವತ ಅವರು ಈ ಹುದ್ದೆಯನ್ನು ವಿದ್ಯಾಸಾಗರರಿಗೆ ಕೊಡಲು ಮುಂದಾದರು. ಆದರೆ ಅದಕ್ಕೊಂದು ಕರಾರನ್ನು

ಅವರು ಜೋಡಿಸಿದರು. ಅವರು ಕಾಲೇಜಿನ ಪ್ರಿನ್ಸಿಪಾಲರೆಂಬ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸಬೇಕೆಂದು ಹೇಳಲಾಗಿತ್ತು. ಅದುವರೆಗೆ ಕಾಲೇಜಿಗೆ ಪ್ರಿನ್ಸಿಪಾಲರಿರಲಿಲ್ಲ. ಆದರೆ ಅದಕ್ಕೆ ಕಾರ್ಯದರ್ಶಿ ಹಾಗೂ ಸಹಾಯಕ ಕಾರ್ಯದರ್ಶಿಗಳಿದ್ದರು. ಈಗ ಅವೆರಡರ ಜವಾಬ್ದಾರಿಯನ್ನು ಪ್ರಿನ್ಸಿಪಾಲರಿಗೆ ಒದಗಿಸಲಾಯಿತು. 1850 ಡಿಸೆಂಬರ್ 5ನೇ ದಿನಾಂಕ ಅವರು ಈ ಹುದ್ದೆ ವಹಿಸಿಕೊಂಡರು. ಆ ಕೂಡಲೆ ಸಂಸ್ಕೃತ ಕಾಲೇಜು ಮಾಡುತ್ತಿರುವ ಕಾರ್ಯ; ಅನುಸರಿಸುತ್ತಿರುವ ಕಾರ್ಯವಿಧಾನದ ಬಗೆಗೆ ವರದಿಯನ್ನು ಸಲ್ಲಿಸಬೇಕೆಂದು ಹಾಗೂ ಅವುಗಳನ್ನು ಸುಧಾರಿಸಲು ಬೇಕಾದ ಸೂಚನೆಗಳನ್ನು ನೀಡಬೇಕೆಂದು ಕೌನ್ಸಿಲ್ ಅಫ್ ಎಜ್ಯೂಕೇಶನ್ ಅವರು ವಿದ್ಯಾಸಾಗರರಿಗೆ ಕೇಳಿಕೊಂಡರು. ಅದರ ಪ್ರಕಾರ ವಿದ್ಯಾಸಾಗರರು ಒಂದು ವರದಿ ಸಲ್ಲಿಸಿದರು. ಆ ವರದಿಯನ್ನು ಮೆಚ್ಚಿಕೊಂಡು ಸಮಿತಿಯವರು ಅವರನ್ನು 1851 ಜನವರಿ 22 ರಂದು ತಿಂಗಳಿಗೆ 150 ರೂಪಾಯಿ ಪಗಾರದ ಮೇಲೆ ಕಾಲೇಜಿನ ಪ್ರಿನ್ಸಿಪಾಲರೆಂದು ನೇಮಿಸಿಕೊಂಡರು. ಇದಲ್ಲದೆ ಅವರಿಗೆ ತಾವು ಹಾಕಿಕೊಂಡ ಸುಧಾರಣೆಗಳಿಗಾಗಿ ತಮ್ಮ ವಿಚಾರಗಳಿಗನುಸಾರವಾಗಿ ಕಾಲೇಜಿನ ಆಡಳಿತ ನಡೆಸಲು ಹಾಗೂ ಯೋಜನೆಗಳನ್ನು ಕಾರ್ಯಗತಗೊಳಿಸಲು ಪೂರ್ಣಸ್ವಾತಂತ್ರ್ಯ ಕೊಡಲಾಯಿತು.

ಆಗ ವಿದ್ಯಾಸಾಗರರು ತಮ್ಮ ಜೀವನದ ಅತ್ಯಂತ ಸೃಜನಾತ್ಮಕ ಕಾಲವನ್ನು ಪ್ರವೇಶಿಸಿದಂತಾಯಿತು. ಅವರ ಬಹುಮುಖ ವ್ಯಕ್ತಿತ್ವ ಹಲವಾರು ದಿಕ್ಕುಗಳಲ್ಲಿ ಸ್ಪಷ್ಟವಾಗಿ ಒಡಮೂಡತೊಡಗಿತು. ಅವರು ಒಂದು ಕಾರ್ಯದಲ್ಲಿ ನಿರತರಾಗದೆ ಏಕಕಾಲಕ್ಕೆ ಹಲವಾರು ಕಾರ್ಯದಲ್ಲಿ ಮಗ್ನರಾಗುತ್ತಿದ್ದರು. ಅವರ ಸೃಜನಾತ್ಮಕ ಶಕ್ತಿಗೆ ಟಿಸಿಳೊಡೆದು ಹಲವಾರು ದಿಸೆಯಲ್ಲಿ ಹೂವು ಅರಳಿದಂತೆ ಗೋಚರಿಸತೊಡಗಿತು.

ಕವಿ ರವೀಂದ್ರನಾಥರ ತಂದೆಯವರಾದ ಮಹರ್ಷಿ ದೇವೇಂದ್ರನಾಥ ಠಾಕೂರರು ತಮ್ಮ ಪ್ರಗತಿಪರ ತತ್ವಬೋಧಿನಿ ಸಭಾವನ್ನು 1839 ರಲ್ಲಿ ಹಾಗೂ 'ತತ್ವ ಬೋಧಿನಿ' ಪತ್ರಿಕೆಯನ್ನು 1843 ರಲ್ಲಿ ಆರಂಭಿಸಿದರು. ಸದಾ ಪ್ರಗತಿಪರ ವಿಚಾರದವರಾದ ಶ್ರೀ ವಿದ್ಯಾಸಾಗರ ಅವರು ಸ್ವಾಭಾವಿಕವಾಗಿ ಇದರಿಂದ ಆಕರ್ಷಿತರಾದರು. ಅವರು ತತ್ವಬೋಧಿನಿ ಪತ್ರಿಕೆಯ ಸಂಪಾದಕ ಮಂಡಳಿಯಲ್ಲಿದ್ದರಲ್ಲದೆ ಬ್ರಹ್ಮೋ ಸಮಾಜದ ತತ್ವಗಳಿಗನುಗುಣವಾಗಿ ಕಾರ್ಯ ಮಾಡುತ್ತಿದ್ದ ತತ್ವಬೋಧಿನಿ ಸಭೆಯೊಂದಿಗೆ ಬಹಳ ಹತ್ತಿರದ ಸಂಬಂಧ ಹೊಂದಿದವರಾಗಿದ್ದರು. ಕೆಲವು ಕಾಲ ಅವರು ಅದರ ಸದಸ್ಯರೂ ಆಗಿದ್ದರು. ಆಗಲೇ ಅವರು ಸಮಾಜ ಸುಧಾರಣೆಯ ಕಾರ್ಯಕ್ಷೇತ್ರದಲ್ಲಿ ಕಾಲಿರಿಸಿದ್ದರು. ಈ ದೇಶದಲ್ಲಿ ಸ್ತ್ರೀ ಶಿಕ್ಷಣ ಅಭಿವೃದ್ಧಿಗಾಗಿ ಯತ್ನಿಸುವವರೆಂದು ಹೆಸರಾದ ಜಾನ್ ಡ್ರಿಂಕ್‌ವಾಟರ್ ಬೆಥೂನ್ ಅವರು ಸ್ತ್ರೀ ಶಿಕ್ಷಣದ ಘನವಾದ ಕಾರ್ಯದಲ್ಲಿ ವಿದ್ಯಾಸಾಗರರು ಒಳ್ಳೆಯ ಸಹಚರರೆಂದು ಕಂಡುಕೊಂಡರು. ಹೀಗೆ ವಿದ್ಯಾಸಾಗರರ ಕಾರ್ಯವ್ಯಾಪ್ತಿ ಹಲವಾರು ದಿಸೆಗಳಲ್ಲಿ

ಹರಡತೊಡಗಿತು. ಸಂಸ್ಕೃತ ಕಾಲೇಜಿನಲ್ಲಿ ನೆಲೆಯೂರಿ ಶಿಕ್ಷಣ ಕ್ಷೇತ್ರದಲ್ಲಿ ಸುಧಾರಣೆಯ ಕಾರ್ಯವನ್ನು ಅವರು ಆರಂಭಿಸಿದ್ದರು. ಈಗ ಸಮಾಜ ಸುಧಾರಣೆಯ ರಂಗದಲ್ಲಿಯೂ ಕಾಲಿರಿಸಿದರು. ಗ್ರಂಥಗಳ ಸಂಪಾದನೆ ಹಾಗೂ ಗ್ರಂಥ ರಚನೆಯ ಮುಖಾಂತರ ಆಗಲೇ ಸಾಹಿತ್ಯ ಕ್ಷೇತ್ರದಲ್ಲಿ ಉಪಯುಕ್ತ ಸೇವೆ ಗೈಯುತ್ತಿದ್ದರು. ಇದರೊಂದಿಗೆ ಅವರ ವ್ಯಕ್ತಿತ್ವಕ್ಕೆ ಇನ್ನೊಂದು ಟಿಸಿಲು ಒಡಮೂಡತೊಡಗಿತು. ಈ ಗುಣವಿಶೇಷವೆಂದರೆ ಅವರ ಅಪಾರ ಅನುಕಂಪ. ಅವರ ಮಾನವೀಯ ಅನುಕಂಪ ಹಲವಾರು ರೀತಿಯ ಕಾರ್ಯಗಳಲ್ಲಿ ಕಾಣತೊಡಗಿತು. ವಿದ್ಯಾಸಾಗರರು ಬಂಗಾಲದ ಸಾಹಿತ್ಯ ಕ್ರಾಂತಿಯ ಪ್ರಥಮ ಮಹಾಕವಿಯಾದ ಮೈಕೆಲ್ ಮಧುಸೂದನ್ ದತ್ತ ಹೇಳಿದಂತೆ ವಿದ್ಯಾಸಾಗರರು ಕರುಣಾಸಾಗರರು ಎಂದು ಎಲ್ಲೆಡೆ ಹೆಸರುವಾಸಿ ಆಗತೊಡಗಿದರು.

ಸಂಸ್ಕೃತ ಕಾಲೇಜಿನ ಪುನರ್‌ರಚನೆಗೆ ಅವರು ಮಾಡಿದ ಸೂಚನೆಗಳ ವರದಿ, ಶಿಕ್ಷಣ ಕ್ಷೇತ್ರದಲ್ಲಿ ಅವರಿಗಿದ್ದ ಪ್ರಗತಿಪರ ವಿಚಾರಗಳು ಹಾಗೂ ಅವರ ಅಭಿಪ್ರಾಯದಲ್ಲಿ ಶಿಕ್ಷಣದ ಗುರಿಗಳನ್ನು ಒಳಗೊಂಡಿದೆ. ಸಂಸ್ಕೃತ ವ್ಯಾಕರಣ ಕಲಿಯುವುದರ ಕಷ್ಟವನ್ನು ಅವರು ಚೆನ್ನಾಗಿ ಅರಿತಿದ್ದರಿಂದ ಅವರು ಅದರ ವ್ಯಾಕರಣವನ್ನು ಮಾತೃಭಾಷೆಯ ಮುಖಾಂತರ ಕಲಿಯಲು ಅನುಕೂಲವಾಗಲೆಂದು ಉಪಕ್ರಮಣಿಕಾ ಹಾಗೂ ವ್ಯಾಕರಣ ಕೌಮುದಿ ಎಂಬ ಗ್ರಂಥಗಳನ್ನು ಬಂಗಾಲಿಯಲ್ಲಿ ರಚಿಸಿದರು. ಪಾಶ್ಚಿಮಾತ್ಯರ ಗಣಿತ ವಿಜ್ಞಾನ ಶಾಸ್ತ್ರವನ್ನು ಕೂಡಾ ಮಾತೃಭಾಷೆಯಲ್ಲಿ ಕಲಿಸುವ ಯೋಜನೆ ಅವರು ರೂಪಿಸಿದರು. ತತ್ವಜ್ಞಾನದ ವಿದ್ಯಾರ್ಥಿಗಳಿಗೆ ಪಾಶ್ಚಿಮಾತ್ಯ ತತ್ವಜ್ಞಾನವನ್ನು ಅರಿತುಕೊಳ್ಳಲು ಸೂಚಿಸಿದರು. ಇಂಗ್ಲಿಷನ್ನು ಕಡ್ಡಾಯವಾಗಿ ಪ್ರತಿಯೊಬ್ಬರೂ ಕಲಿಯಬೇಕೆಂದು ಅವರು ಪ್ರತಿಪಾದಿಸಿದರು.

ಸಂಸ್ಕೃತ ಕಾಲೇಜಿನಲ್ಲಿ ಕಲಿಸುವ ಪದ್ಧತಿಗಳಲ್ಲಿ ಹಾಗೂ ಅಭ್ಯಾಸ ಪಠ್ಯ ವಿಷಯಗಳಲ್ಲಿ ಅನೇಕ ಬದಲಾವಣೆಗಳನ್ನು ಮಾಡಿದರು. ಇದಕ್ಕೆ ಕೌನ್ಸಿಲ್ ಅಫ್ ಎಜ್ಯೂಕೇಶನ್ನಿನ ಬೆಂಬಲವೂ ಇದ್ದಿತು. ಅವರು ಮಾಡಿದ ಮೊದಲನೇ ದೊಡ್ಡ ಬದಲಾವಣೆಯೆಂದರೆ ಜಾತಿಯ ಆಧಾರದ ಮೇಲೆ ಪ್ರವೇಶ ಕೊಡುವ ಪದ್ಧತಿಯನ್ನು ತೆಗೆದುಹಾಕಿದ್ದು. ವಿದ್ಯಾರ್ಥಿಗಳಿಗೆ ಪ್ರವೇಶ ಹಾಗೂ ಮಾಸಿಕ ಫೀಯನ್ನು ಕಡ್ಡಾಯವಾಗಿ ಮಾಡಿದರು. ಇದರಿಂದ ವಿದ್ಯಾರ್ಥಿಗಳು ಅಭ್ಯಾಸದ ಬಗ್ಗೆ ಹೆಚ್ಚು ಆಸಕ್ತರಾಗುವಂತಾಯಿತು. ಅವರು ಇಂಗ್ಲಿಷ್ ಅಭ್ಯಾಸವನ್ನು ಕಡ್ಡಾಯ ಮಾಡಿದರಲ್ಲದೆ ಆಧುನಿಕ ಗಣಿತ ಜ್ಞಾನವನ್ನು ಕೂಡಾ ಕಡ್ಡಾಯವಾಗಿ ಕಲಿಯುವಂತೆ ಮಾಡಿದರು. ಶಿಕ್ಷಕರೂ ಹಾಗೂ ವಿದ್ಯಾರ್ಥಿಗಳು ವೇಳೆಗೆ ಸರಿಯಾಗಿ ಬಂದು, ವರ್ಗಗಳಲ್ಲಿ ನಿತ್ಯದ ಪಾಠ ಕ್ರಮಗಳು ಸರಿಯಾಗಿ ನಡೆಯುವಂತೆ ಕ್ರಮ ಕೈಗೊಂಡರು. ಇದನ್ನು ಬಹಳ ದಿವಸಗಳಿಂದ ನಿರ್ಲಕ್ಷಿಸಲಾಗಿತ್ತು.

ಅವರು ಕೈಕೊಂಡ ಕ್ರಮಗಳ ಬಗ್ಗೆ ಹಲವಾರು ಕಥೆಗಳು ಪ್ರಚಲಿತವಾಗಿವೆ.

ಕಾಲೇಜಿಗೆ ಬರುವ ವಿಷಯದಲ್ಲಿ ಶಿಕ್ಷಕರೇ ನಿತ್ಯ ತಡಮಾಡಿ ಬರುವದು ರೂಢಿಯಾಗಿಬಿಟ್ಟಿತ್ತು. ಅವರಲ್ಲಿ ಹಲವರು, ಇದೇ ಕಾಲೇಜಿನಲ್ಲಿ ವಿದ್ಯಾಸಾಗರರು ವಿದ್ಯಾರ್ಥಿಯಾಗಿದ್ದಾಗ ಅವರಿಗೆ ಕಲಿಸಿದ ಗುರುಗಳೇ ಆಗಿದ್ದರು. ಈಗ ವಿದ್ಯಾಸಾಗರರು ಅವರ ಮೇಲಿನ ಪ್ರಿನ್ಸಿಪಾಲರಾಗಿದ್ದರು. ಅವರ ವಯಸ್ಸು ಹಾಗೂ ಬಹು ದಿವಸದ ಸೇವೆಗೆ ಸಲ್ಲಬೇಕಾದ ಗೌರವಾದಿಗಳಿಂದಾಗಿ ವಿದ್ಯಾಸಾಗರರು ಅವರಿಗೆ ಮುಖದ ಮೇಲೆ ಬುದ್ಧಿ ಹೇಳಲು ಹಿಂದೆ ಮುಂದೆ ನೋಡುತ್ತಿದ್ದರು. ಅದಕ್ಕಾಗಿ ಅವರು ಒಂದು ಬೇರೆ ರೀತಿಯ ಹೊಸ ವಿಧಾನವನ್ನು ಅನುಸರಿಸಿದರು. ಅವರು ಒಂದು ಕಟು ಶಬ್ದವನ್ನೂ ಬಳಸಲಿಲ್ಲ. ತಡಮಾಡಿ ಬರುತ್ತಿದ್ದ ಶಿಕ್ಷಕರನ್ನು ಪ್ರವೇಶ ಮಾಡುತ್ತಿರುವಲ್ಲಿಯೇ ಭೇಟಿಯಾಗಿ "ನೀವು ಈಗ ಬಂದಿರಾ" ಎಂದು ಮಾತ್ರ ಕೇಳುತ್ತಿದ್ದರು. ತಡಮಾಡಿ ಬಂದ ಶಿಕ್ಷಕರು ತಮ್ಮ ತಪ್ಪಿಗೆ ನಾಚಿಕೆಪಟ್ಟು ತಮ್ಮ ನಡವಳಿಕೆಯನ್ನು ಸುಧಾರಿಸಿಕೊಳ್ಳಹತ್ತಿದ್ದರು. ಆದರೆ ಜಯನಾರಾಯಣ ಕರ್ತಪಂಚಾನನ ಎಂಬ ಶಿಕ್ಷಕರು ಮಾತ್ರ ತಿದ್ದಲಾರದಂತಹ ವ್ಯಕ್ತಿಯಾಗಿ ಮುಂದುವರಿದರು. ಅವರಿಗೆ ಏನು ಮಾಡಿದರೂ ಅವರು ವೇಳೆಗೆ ಸರಿಯಾಗಿ ಬರುತ್ತಿರಲಿಲ್ಲ. ಅವರಿಗಾಗಿ ವಿದ್ಯಾಸಾಗರರು ಸ್ವಲ್ಪ ಬೇರೆ ವಿಧಾನವನ್ನು ಅನುಸರಿಸಿದರು. ಜಯನಾರಾಯಣರು ದಿನನಿತ್ಯ ತಡವಾಗಿ ಬರುತ್ತಿರುವಾಗ ದಿನಾಲೂ ವಿದ್ಯಾಸಾಗರರು ಅವರು ಆವರಣ ಪ್ರವೇಶ ಮಾಡುತ್ತಿರುವಲ್ಲಿಯೆ ನಿಂತುಬಿಡುತ್ತಿದ್ದರು. ಅವರು ತಡಮಾಡಿ ಬರುವುದನ್ನು ತಾವು ನೋಡಿರುವರೆಂಬುದನ್ನು ಜಯನಾರಾಯಣರು ನೋಡಿ ತಿಳಿಯಬೇಕೆಂಬುದೇ ಅವರ ಉದ್ದೇಶವಾಗಿದ್ದಿತು. ಆಗ ಅವರು ಯಾವ ಮಾತನ್ನೂ ಆಡುತ್ತಿರಲಿಲ್ಲ. ಈ ಕ್ರಮದ ನೈತಿಕ ಪರಣಾಮ ಎಷ್ಟಾಯಿತೆಂದರೆ, ನಾಚಿಕೆಪಟ್ಟು ಜಯನಾರಾಯಣರು ತಾವೇ ವೇಳೆಗೆ ಸರಿಯಾಗಿ ಬರುವೆನೆಂದು ಆಶ್ವಾಸನೆ ಕೊಡುವಂತಾಯಿತು.

ವಿದ್ಯಾಸಾಗರರ ಪ್ರಗತಿಪರ ಮಾರ್ಗದರ್ಶನದಿಂದ ಸಂಸ್ಕೃತ ಕಾಲೇಜು ಉತ್ಕರ್ಷ ಹೊಂದತೊಡಗಿತು. ಆದರೆ 1853 ರಲ್ಲಿ ಒಂದು ಘಟನೆ ಜರುಗಿತು. ಅದು ಒಂದು ಸಂಕೀರ್ಣ ಪರಿಸ್ಥಿತಿಯಾಗಿ ಪರಿಣಮಿಸಬಹುದಾಗಿತ್ತು. ಆದರೆ ಸುದೈವದಿಂದ ಹಾಗಾಗಲಿಲ್ಲ. ವಿದ್ಯಾಸಾಗರರ ಕಾರ್ಯದ ಬಗ್ಗೆ ಸದಭಿಪ್ರಾಯ ಹೊಂದಿದ್ದ 'ಕೌನ್ಸಿಲ್ ಅಪ್ ಎಜ್ಯೂಕೇಶನ್' ಬನಾರಸ ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾದ ಡಾ. ಜೆ.ಆರ್.ಬೆಲೆಂಟಾಯಿನ್ ಅವರಿಗೆ ಕಲಕತ್ತಾ ಸಂಸ್ಕೃತ ಕಾಲೇಜಿನ ಕಾರ್ಯದ ಬಗ್ಗೆ ವರದಿ ಸಲ್ಲಿಸಲು ಆಮಂತ್ರಿಸಿತು. ವಿದ್ಯಾಸಾಗರರ ಕಾರ್ಯವನ್ನು ಬಹುಮಟ್ಟಿಗೆ ಪ್ರಶಂಸಿಸಿದರೂ, ಬೆಲೆಂಟಾಯಿನ್ ಅವರು ಕೆಲವೊಂದು ಸೂಚನೆ ಮಾಡಿದರು. ಅವು ಅಷ್ಟೊಂದು ಮಹತ್ವದ್ದಾಗಿರದಿದ್ದರೂ ವಿದ್ಯಾಸಾಗರರು ಅವುಗಳಿಗಿತ್ತ ಉತ್ತರಗಳಿಂದ ಹೆಚ್ಚು ಮಹತ್ವದ್ದಾಗಿ ಕಂಡುಬಂದವು. ಬೆಲೆಂಟಾಯಿನ್‌ರು ತಾವು ಬರೆದ ತರ್ಕಶಾಸ್ತ್ರದ ಆರ್ಕ ಎಂಬ ಗ್ರಂಥವನ್ನು ಅಭ್ಯಾಸ ಕ್ರಮದಲ್ಲಿ ಸೇರಿಸಬೇಕು: ಯಾಕೆಂದರೆ ಅದರಲ್ಲಿ ಭಾರತೀಯ ನ್ಯಾಯತತ್ವದ ಹಾಗೂ

ಮಿಲನ್ ತತ್ವಗಳಲ್ಲಿ ಕಂಡುಬಂದ ಶಬ್ದ ಸಾಮ್ಯತೆಯನ್ನು ಎತ್ತಿತೋರಿಸಿದ್ದುಂಟು ಎಂದು ಅಭಿಪ್ರಾಯಪಟ್ಟಿದ್ದರು. ವಿದ್ಯಾಸಾಗರರು ವಿದ್ಯಾರ್ಥಿಗಳಿಗೆ ಮೂಲ ಗ್ರಂಥಗಳನ್ನು ಓದಲು ಪ್ರೋತ್ಸಾಹಿಸಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿ ಆ ಸೂಚನೆಯನ್ನು ತಿರಸ್ಕರಿಸಿದರು. ತತ್ವಜ್ಞಾನದ ಅಭ್ಯಾಸಪಟ್ಟಿಯನ್ನು ಬಿಶಪ್ ಬರ್ಕಲೆಯ ಇನ್‌ಕ್ವೈರರ್ ಎಂಬ ಗ್ರಂಥದ ಅಭ್ಯಾಸವನ್ನು ಸೇರಿಸಬೇಕೆಂಬ ಅವರ ಇನ್ನೊಂದು ಸೂಚನೆಯನ್ನು ವಿದ್ಯಾಸಾಗರರು ವಿರೋಧಿಸಿದರು. ಅದಕ್ಕೆ ಅವರು ಕೊಟ್ಟ ಕಾರಣವೆಂದರೆ, ಸಾಂಖ್ಯ ಹಾಗೂ ವೇದಾಂತಗಳು ಬಹುಮಟ್ಟಿಗೆ ಕೊನೆಗೆ ಬರುವ ನಿರ್ಣಯಕ್ಕೆ ಬರ್ಕ್‌ಲ್ ಕೂಡಾ ಬಂದಿರುವುದುಂಟು. ಅವು ಹಿಂದುಗಳಿಗೆ ಎಷ್ಟೇ ಪೂಜ್ಯವಾಗಿದ್ದರೂ, ಅವು ಭದ್ರ ತಳಹದಿಯ ತತ್ವಜ್ಞಾನವೆಂದೆನಿಸಲಾರವು. ಅವರು ಖಚಿತವಾದ ಆಧಾರದ ಮೇಲೆ ವಿದ್ಯಾರ್ಥಿಗಳು ಸಂಸ್ಕೃತದಲ್ಲಿ ಆಗಲೆ ಕಲಿತದ್ದನ್ನು ಮತ್ತೆ ಇಂಗ್ಲಿಷಿನಲ್ಲಿ ಕಲಿಸುವದು ನಿರರ್ಥಕವೆಂದು ಅಭಿಪ್ರಾಯಪಟ್ಟರು.

ಬೆಲೆಂಟಾಯಿನ್‌ರು ಪಾಂಡಿತ್ಯಪೂರ್ಣ ಭಾರತೀಯ ಪ್ರಾಚೀನ ಗ್ರಂಥಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ವಿದ್ಯಾಸಾಗರರ ನಿಲುಮೆ ಹಾಗಿರಲಿಲ್ಲ. ಅವರು ಪ್ರಗತಿಶೀಲ ಮುಂಧೋರಣೆವುಳ್ಳವರಾಗಿದ್ದರು. ಹೊಸದಾಗಿ ಪಸರಿಸುತ್ತಿದ್ದ ಪಾಶ್ಚಿಮಾತ್ಯ ಸಂಸ್ಕೃತಿಯ ಬೆಳಕನ್ನು ಅವರು ಸ್ವಾಗತಿಸಿ ಅದನ್ನು ಪ್ರಸಾರಗೊಳಿಸುತ್ತಿದ್ದರು. ಈ ಕಾರಣ ಭಾರತೀಯ ವಿದ್ವಾಂಸರ ಅತೀವ ಅಭಿಮಾನವನ್ನು ಅವರು ಕಟುವಾಗಿ ಖಂಡಿಸುತ್ತಿದ್ದರು. ಯುರೋಪಿನ ಹೊಸ ವಿಜ್ಞಾನದ ಮಾಹಿತಿಯನ್ನು ಒಪ್ಪಿಕೊಂಡು, ಅದನ್ನು ಸ್ವೀಕರಿಸುವಂತೆ ಭಾರತೀಯ ಪಂಡಿತರನ್ನೇ ಒಪ್ಪಿಸುವುದು ವ್ಯರ್ಥ ಕಾಲಹರಣವೆನಿಸುವದೆಂದು ಅವರ ಬಗೆದಂತಿತ್ತು. "ಅವರು ಪೂರ್ವಾಗ್ರಹ ಪೀಡಿತ ದೃಢವಾದ ನಿಲುಮೆಯುಳ್ಳವರೂ ಕಲುಷಿತ ಮನಸ್ಸಿನವರೂ ಆಗಿದ್ದಾರೆ. ಅವರ ಶಾಸ್ತ್ರಗಳೆಲ್ಲ, ಸರ್ವವಿದಿತರಾದ ಋಷಿಗಳಿಂದಲೇ ಹೊರ ಹೊಮ್ಮಿರುವುದರಿಂದ ಅವು ಎಂದಿಗೂ ಸುಳ್ಳಾಗಲಾರದೆಂದೇ ಅವರು ನಂಬಿದ್ದಾರೆ. ಅವರನ್ನು ಒಪ್ಪಿಸುವ ಅವಶ್ಯಕತೆಯೆ ಇಲ್ಲ, ಯಾಕೆಂದರೆ ಅವರಿಂದ ನಾನು ಯಾವ ಸಹಾಯವನ್ನೂ ನಿರೀಕ್ಷಿಸುವುದಿಲ್ಲ. ದಿನೆ ದಿನೇ ಅಪಖ್ಯಾತಿ ಹೊಂದುತ್ತಿರುವ ಅವರ ವಿರೋಧಕ್ಕೂ ನಾವು ಹೆದರಬೇಕಾಗಿಲ್ಲ" ಎಂದು ವಿದ್ಯಾಸಾಗರರು ಹೇಳಿದರು.

ವಿದ್ಯಾಸಾಗರರು ಹೇಳಿದ ಇನ್ನೊಂದು ವಿಷಯ ಮಹತ್ವದ್ದಾಗಿತ್ತು. ಆಗಿನ ಕಾಲಕ್ಕೆ ಅವಶ್ಯವಾದದ್ದು ಸಾಮಾನ್ಯ ಜನತೆಯ ಶಿಕ್ಷಣ. ಈ ಕಾರ್ಯಕ್ಕೆ ಇಂಗ್ಲಿಷ್ ಮತ್ತು ಸಂಸ್ಕೃತ ಎರಡರಲ್ಲಿಯೇ ಪರಿಣಿತರಾದ ಸಂಸ್ಕೃತ ಕಾಲೇಜಿನ ವಿದ್ಯಾರ್ಥಿಗಳೇ ಜನಸಾಮಾನ್ಯರಲ್ಲಿ ಜ್ಞಾನದ ಜ್ಯೋತಿಯನ್ನು ಬೆಳಗಿಸುವ ಕಾರ್ಯಕ್ಕೆ ಅತ್ಯಂತ ಯೋಗ್ಯ ವ್ಯಕ್ತಿಗಳಾಗಿದ್ದರು. ಇದರ ಬಗ್ಗೆ ವಿದ್ಯಾಸಾಗರರು ಅತ್ಯಂತ ದೃಢವಾದ ನಂಬಿಗೆವುಳ್ಳವರಾಗಿದ್ದರು. "ಬಂಗಾಲದ ಜನಸಾಮಾನ್ಯರು ಶಿಕ್ಷಣ ಹೊಂದಲು ಬಹಳ ಆತುರರಾಗಿರುವ ಲಕ್ಷಣಗಳು

ಕಂಡುಬರುತ್ತಿವೆ. ನಾವು ಆದಷ್ಟು ಹೆಚ್ಚಿನ ಸಂಖ್ಯೆಯಲ್ಲಿಯೇ ದೇಶೀಯ ಭಾಷೆಗಳಲ್ಲಿ ಕಲಿಸುವ ಶಾಲೆಗಳನ್ನು ಆರಂಭಿಸೋಣ. ಉಪಯುಕ್ತವಾದ ಹಾಗೂ ಜ್ಞಾನಪ್ರಸಾರ ಮಾಡಬಲ್ಲ ಅನೇಕ ಪುಸ್ತಕಗಳನ್ನು ದೇಶೀಯ ಭಾಷೆಗಳಲ್ಲಿ ಹೊರತರೋಣ, ಶಿಕ್ಷಕ ಹುದ್ದೆಯಲ್ಲಿ ಜವಾಬ್ದಾರಿ ಹೊರಬಲ್ಲ ಒಂದು ಹೊಸ ಪೀಳಿಗೆಯನ್ನು ತರಬೇತಿಗೊಳಿಸಿ ಹೊರತರೋಣ, ಹೀಗೆ ಮಾಡಿದರೆ ನಮ್ಮ ಉದ್ದೇಶ ಸಫಲವಾಗುತ್ತದೆ" ಎಂದು ವಿದ್ಯಾಸಾಗರರು ಹೇಳಿದರು.

ಬೆಲೆಂಟಾಯಿನ್‌ರೊಂದಿಗೆ ಸಂಘರ್ಷ ವಿದ್ಯಾಸಾಗರರು ಎಂಥ ವಿವೇಕಶೀಲರು, ಮಾನವೀಯತೆವುಳ್ಳವರು, ಜನತಾ ಶಿಕ್ಷಣದಲ್ಲಿ ಆಸಕ್ತರು ಹಾಗೂ ಅಂಧಶ್ರದ್ಧೆ ಮತ್ತು ಭ್ರಾಂತಿಗಳ ವಿರುದ್ಧ ಹೋರಾಟಗಾರರಾಗಿದ್ದರೆಂಬುದನ್ನು ಹೊರಹೊಮ್ಮಿಸಿತು. ಪ್ರಾಚೀನವು ಎಷ್ಟೇ ವೈಭವಪೂರಿತವಾಗಿದ್ದರೂ ಅದಕ್ಕೆ ಕಿವಿಗೊಟ್ಟು ಕುಳಿತುಕೊಳ್ಳುವುದರಲ್ಲಿ ಅರ್ಥವಿಲ್ಲ. ಆದರೆ ದೇಶದ ಸಾಂಸ್ಕೃತಿಕ ಪರಂಪರೆಯಲ್ಲಿ ಶ್ರೇಷ್ಠವಾದದ್ದು ಹಾಗೂ ಬಾಳುವಂಥ ಕೊಡುಗೆಗಳೊಂದಿಗೆ ನಾಳಿನ ಜೀವನಕ್ಕೆ ಉಪಯುಕ್ತವಾಗಬಲ್ಲ ಹೊಸ ಬೆಳಕನನ್ನು ಸ್ವಾಗತಿಸಿ ಅದನ್ನು ಸಮರಸಗೊಳಿಸಲು ಅವರು ಸದಾ ಯತ್ನಿಸುತ್ತಿದ್ದರು. ರೂಪಗೊಳ್ಳುತ್ತಿದ್ದ ಹೊಸ ಮನ್ವಂತರ ಒಡ್ಡಿದ ಸಮಸ್ಯೆಗಳಿಗೆ ಪರಹಾರ ನೀಡಬಲ್ಲ, ಶಿಕ್ಷಣ ಪದ್ಧತಿಯನ್ನು ರೂಪಿಸಲು ಅವರು ಹೆಣಗುತ್ತಿದ್ದರು. ಅದು ಪೂರ್ಣ ಸಂಸ್ಕೃತ ಅಭ್ಯಾಸವಾಗಿರಲು ಸಾಧ್ಯವಿರಲಿಲ್ಲ. ಹಾಗೆಯೇ ಪೂರ್ಣ ಇಂಗ್ಲಿಷ್ ಅಭ್ಯಾಸವೂ ಆಗಿರಲು ಸಾಧ್ಯವಿರಲಿಲ್ಲ.

ಮೊದಮೊದಲು ಬೆಲೆಂಟಾಯಿನ್‌ರ ಅಭಿಪ್ರಾಯಕ್ಕೆ ಹೆಚ್ಚು ಬಲವಿದ್ದರೂ, ಕೌನ್ಸಿಲ್ ಕೊನೆಗೆ ವಿದ್ಯಾಸಾಗರರ ಅಭಿಪ್ರಾಯಕ್ಕೆ ಒಪ್ಪಿಗೆಯಿತ್ತು, ಅವರಿಗೆ ತಮ್ಮ ಅಭಿಪ್ರಾಯಕ್ಕನುಗುಣವಾಗಿ ಕಾರ್ಯೋನ್ಮುಖರಾಗಲು ಒಪ್ಪಿಗೆಯಿತ್ತಿತು. ಅದೇ ವೇಳೆಗೆ ಅವರ ಪಗಾರವನ್ನು 300 ರೂಪಾಯಿಗಳಿಗೆ ಏರಿಸಲಾಯಿತು. ಕಾಲೇಜು ಉತ್ಕರ್ಷ ಹೊಂದತೊಡಗಿತು. ಉನ್ನತ ಬ್ರಿಟಿಷ್ ಅಧಿಕಾರಿಗಳು ವಿದ್ಯಾಸಾಗರರ ಬಗೆಗೆ ಬಹಳ ಗೌರವ ಭಾವನೆಯನ್ನು ತಳೆಯತೊಡಗಿದರು. ಬಂಗಾಲದ ಸುಸಂಸ್ಕೃತ ಸಮಾಜದ ಹಾಗೂ ಬಂಗಾಲದ ಉದಯೋನ್ಮುಖ ಮಧ್ಯಮ ವರ್ಗದ ಗೌರವಕ್ಕೂ ಅವರು ಪಾತ್ರರಾದರು.

1953-54 ರಲ್ಲಿ ವಿದ್ಯಾಸಾಗರರು ಹಲವು ಸಾಹಿತ್ಯದ ಕೃತಿಗಳ ರಚನೆ ಮಾಡಿದರು. ಏಷಿಯಾಟಿಕ್ ಸೊಸೈಟಿಯು ಪ್ರಕಟಗೊಳಿಸಿದ್ದ ಮಧ್ವಾಚಾರ್ಯರ *ಸರ್ವದರ್ಶನ ಸಂಗ್ರಹ* ಗ್ರಂಥವನ್ನು ಸಂಪಾದನೆ ಮಾಡಿಕೊಟ್ಟರು. ಹಾಗೆಯೆ *ರಘುವಂಶ* ಮತ್ತು *ಕಿರಾತಾರ್ಜುನೀಯಂ* ಗ್ರಂಥಗಳ ಸಂಪಾದನೆಯನ್ನು ಮಾಡಿಕೊಟ್ಟರು. ಸಂಸ್ಕೃತ ಭಾಷೆ ಹಾಗೂ ಸಾಹಿತ್ಯದ ಬಗ್ಗೆ ಒಂದು ಲೇಖನವನ್ನು ಪ್ರಕಟಿಸಿದರು. ಇದಲ್ಲದೆ *ವ್ಯಾಕರಣ ಕೌಮುದಿ* ಹಾಗೂ *ಶಕುಂತಲಾ* ಎಂಬ ಗ್ರಂಥಗಳನ್ನು ಬರೆದರು.

ಇದೇ ಕಾಲದ ಇನ್ನೊಂದು ಮಹತ್ವದ ಘಟನೆಯೆಂದರೆ ತಮ್ಮ ಹುಟ್ಟೂರಾದ ಬೆರಸಿಂಘಾದಲ್ಲಿ ಉಚಿತ ವಿದ್ಯಾ ಶಾಲೆಯ ಆರಂಭ; ಶಾಲೆಯ ಆರಂಭಕ್ಕೆ ಬೇಕಾದ ಎಲ್ಲ ಖರ್ಚನ್ನು ತಾವೇ ವಹಿಸಿದರಲ್ಲದೆ ತಮ್ಮ ಮನೆಯಲ್ಲಿಯೇ 30 ವಿದ್ಯಾರ್ಥಿಗಳಿಗೆ ಉಚಿತ ವಸತಿ ಹಾಗೂ ಊಟದ ವ್ಯವಸ್ಥೆ ಮಾಡಿದರು. ಅವರ ವ್ಯಕ್ತಿತ್ವದಲ್ಲಿ ಹುದುಗಿದ ಮಾನವೀಯ ಅನುಕಂಪ ಹತ್ತಾರು ರೀತಿಯಲ್ಲಿ ಹೊರಹೊಮ್ಮತೊಡಗಿತು. ದೀನರ ಕಷ್ಟ ಕಾರ್ಪಣ್ಯಗಳು, ಅವರನ್ನು ಆವರಿಸಿದ ಅಂಧಕಾರ ಇವುಗಳನ್ನು ತೊಲಗಿಸಲು ಅವರ ಮಾನವೀಯತೆ ಹಲವಾರು ದಿಕ್ಕಿನಲ್ಲಿ ಹರಿಯತೊಡಗಿತು.

ಇದೇ ಸಮಯದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಹಲವಾರು ಮಹತ್ವದ ಬದಲಾವಣೆಗಳು ಕಂಡುಬಂದವು. 1854 ರ ಆದಿಯಲ್ಲಿ ಫೋರ್ಟ್ ವಿಲಿಯಂ ಕಾಲೇಜಿನ ಬದಲಾಗಿ "ಬೋರ್ಡ್ ಆಫ್ ಎಕ್ಸಾಮಿನರ್ಸ್" ಸ್ಥಾಪಿತವಾಯಿತು. ಅದರ ಮುಖ್ಯಸ್ಥರೆಂದು ಗಾರ್ಡನ್ ಯಂಗ್ ಎಂಬ ಅನನುಭವಿ ಅಧಿಕಾರಿಯವರನ್ನು ಡೈರಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ಎಂದು ನೇಮಿಸಲಾಯಿತು. ಅವರೊಂದಿಗೆ ವಿದ್ಯಾಸಾಗರರ ಸಂಬಂಧ ಕೊನೆಗೂ ಅಷ್ಟೊಂದು ಸಂತೋಷದಾಯಕವಾಗಿರಲಿಲ್ಲ. ವಿಶ್ವವಿದ್ಯಾಲಯಗಳನ್ನು ಆರಂಭಿಸುವ ಬಗ್ಗೆ ಸಮಿತಿಯೊಂದನ್ನು ನೇಮಿಸಿದಾಗ ವಿದ್ಯಾಸಾಗರರು ವಿಶ್ವವಿದ್ಯಾಲಯದ "ಫೆಲೋ" ಎಂದು ನೇಮಕಗೊಂಡರು.

# 3. ದೀಪ ಬೆಳಗಿತು

ಸಾಮಾನ್ಯ ಜನರಲ್ಲಿ ಶಿಕ್ಷಣವನ್ನು ಪ್ರಸಾರ ಮಾಡುವುವೇ ವಿದ್ಯಾಸಾಗರರ ಜೀವನದ ಗುರಿಯಾಗಿತ್ತು. ತನ್ನ ದೇಶದ ಜನತೆಯನ್ನು ಆವರಿಸಿದ ಕತ್ತಲನ್ನು ಹೊಡೆದೋಡಿಸುವ ಮಹತ್ವದ ಕಾರ್ಯವನ್ನು ವಿದ್ಯಾಸಾಗರರು ತಮ್ಮ ಮುಖ್ಯ ಕರ್ತವ್ಯವೆಂದು ಬಗೆದಿದ್ದರು. ಅವರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗುವುದಕ್ಕಿಂತ ಮುಂಚೆಯೆ ಶಿಕ್ಷಣ ಪ್ರಸಾರದ ಆವೇಶ ಅವರ ಹೃದಯದಲ್ಲಿ ಮೂಡಿತ್ತು. ಪ್ರಿನ್ಸಿಪಾಲರಾದ ನಂತರ ಅದು ಅವರ ಹೃದಯವನ್ನು ಪೂರ್ತಿಯಾಗಿ ಆವರಿಸಿತು.

'ಮೆಕಾಲೆ ಮಿನಿಟು' ಶಿಕ್ಷಣ ನೀತಿಯ ತಳಹದಿಯಾಗಬೇಕೆಂದು ಸರ್ಕಾರ ಒಪ್ಪಿಗೆಯಿತ್ತ ನಂತರ ಸರ್ಕಾರದ ದೃಷ್ಟಿ ಇಂಗ್ಲಿಷ್ ಶಿಕ್ಷಣದ ಮೇಲೆ ಕೇಂದ್ರೀಕೃತವಾಯಿತು. ದೇಶೀಯ ಭಾಷೆಗಳೂ ಮತ್ತು ಅವುಗಳ ಮೂಲಕ ನಡೆಯುತ್ತಿದ್ದ ಶಿಕ್ಷಣ ಬಹಳ ಕೀಳು ಸ್ಥಾನಕ್ಕೆ ಇಳಿಯುವಷ್ಟು ನಿರ್ಲಕ್ಷಿಸಲ್ಪಟ್ಟಿದ್ದವು. ದೇಶೀಯ ಭಾಷೆಗಳ ಶಿಕ್ಷಣದ ಮುಖಾಂತರವೇ ಜನತೆಯ ಉದ್ಧಾರ ಸಾಧ್ಯ. ನಿರ್ಲಕ್ಷಿಸಲ್ಪಟ್ಟ ಈ ರಾಷ್ಟ್ರೀಯ ಕಾರ್ಯದ ಬಗ್ಗೆ ವಿದ್ಯಾಸಾಗರರು ಚೆನ್ನಾಗಿ ಅರಿತವರಾಗಿದ್ದರು. ಅದಕ್ಕಾಗಿಯೇ ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣದ ಪ್ರಸಾರದ ಬಗ್ಗೆ ವಿದ್ಯಾಸಾಗರರು ಅಷ್ಟೊಂದು ಆಸಕ್ತರಾಗಿದ್ದರು.

ವಿದ್ಯಾಸಾಗರರು ಫೋರ್ಟ್ ವಿಲಿಯಂ ಕಾಲೇಜಿನಲ್ಲಿ ಇದ್ದಾಗಲೇ ಗೌರ್ನರ್ ಜನರಲ್ ಲಾರ್ಡ್ ಹಾರ್ಡಿಂಜ್ ಅವರು ಮಾತೃಭಾಷೆಯ ಮುಖಾಂತರ ಪ್ರಾಥಮಿಕ ಶಿಕ್ಷಣದ ಪ್ರಸಾರದ ಬಗೆಗೆ ಆಸಕ್ತರಾದರು. ಮಾರ್ಷಲ್ ಹಾಗೂ ವಿದ್ಯಾಸಾಗರರ ಸಲಹೆಯ ಮೇರೆಗೆ ಬಂಗಾಲ, ಬಿಹಾರ, ಒರಿಸ್ಸಾ ಪ್ರಾಂತಗಳಲ್ಲಿ ಒಟ್ಟು 101 ಪಾಠ ಶಾಲೆಗಳನ್ನು ತೆರೆದರು. ಇವುಗಳು ಹಾರ್ಡಿಂಜ್ ಸ್ಕೂಲ್‌ಗಳೆಂದು ಪ್ರಖ್ಯಾತಿಯನ್ನು ಪಡೆದವು. ಆದರೆ ಒಳ್ಳೆಯ ಶಿಕ್ಷಕರ ಅಭಾವ ಮತ್ತು ಇತರ ಹಲವಾರು ಕಾರಣಗಳಿಂದ ಅವು ಯಶಸ್ವಿಯಾಗಲಿಲ್ಲ.

ಈ ಪ್ರಯತ್ನವನ್ನು ಹತ್ತು ವರ್ಷಗಳ ನಂತರ ಮತ್ತೆ ಮಾಡಲಾಯಿತು. ವಾಯವ್ಯ ಗಡಿ ಪ್ರಾಂತ್ಯದಲ್ಲಿ ದೇಶೀಯ ಭಾಷಾ ವಿದ್ಯಾಭ್ಯಾಸದ ಬಗ್ಗೆ ಮಿಸ್ಟರ್ ಥಾಮ್‌ಸನ್ನರು ಕೈಗೊಂಡ ಪ್ರಯೋಗದಿಂದ ಪ್ರೇರಿತರಾಗಿ ಬಂಗಾಲ ಸರ್ಕಾರ ಈ ದಿಸೆಯಲ್ಲಿ ಮರುಪ್ರಯತ್ನ ಮಾಡಲು ಮುಂದಾಯಿತು. ಇದರಿಂದಾಗಿ ಜನತಾ ಶಿಕ್ಷಣದ ಮುಂದಾಳಾಗಿ ವಿದ್ಯಾಸಾಗರರು ಮತ್ತೆ ಕಾರ್ಯೋನ್ಮುಖರಾದರು.

ಬೆಲೆಂಟಾಯಿನ್‌ರ ವರದಿಯ ಮೇಲೆ ಬರೆದ ತಮ್ಮ ಟೀಕೆಯಲ್ಲಿ ವಿದ್ಯಾಸಾಗರರು, ದೇಶೀಯ ಭಾಷೆಗಳಲ್ಲಿ ಕಲಿಸುವ ಪ್ರಾಥಮಿಕ ಶಾಲೆಗಳ ಆರಂಭ, ದೇಶೀಯ ಭಾಷೆಗಳಲ್ಲಿ ಪಠ್ಯಪುಸ್ತಕಗಳನ್ನು ಪ್ರಕಟಿಸುವುದು, ಹಾಗೂ ಈ ಶಾಲೆಗಳಿಗೆ ಬೇಕಾಗುವ ಶಿಕ್ಷಕರನ್ನು ತರಬೇತಿಗೊಳಿಸುವುದು, ಇವುಗಳ ಮಹತ್ವವನ್ನು ಒತ್ತಿ ಹೇಳಿದ್ದರು. ಅವರ ವಿಚಾರಗಳು ಆಗಲೇ ಸರ್ಕಾರದ ಪರಶೀಲನೆಯಲ್ಲಿದ್ದವು. ಸಂಸ್ಕೃತ ಕಾಲೇಜಿನ ಕೆಲಸದ ಮೇಲ್ವಿಚಾರಣೆ, ಹೊಸದಾಗಿ ಆರಂಭಿಸಿದ ಶಿಕ್ಷಕರ ವಿದ್ಯಾಲಯಕ್ಕೆ ಮಾರ್ಗದರ್ಶನ ನೀಡುವುದು, ತಮ್ಮ ಅಧೀನದಲ್ಲಿ ಇದ್ದ ಎಲ್ಲ ಜಿಲ್ಲೆಗಳಲ್ಲಿ ದೇಶೀಯ ಭಾಷೆಯ ಪ್ರಾಥಮಿಕ ಶಾಲೆಗಳನ್ನು ಆರಂಭಿಸುವುದು–ಈ ಮೂರೂ ಅವರ ಜವಾಬ್ದಾರಿಗಳಾದುವು. ಈ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸುವುದು ಪ್ರತಿಭಾನ್ವಿತರೂ, ಕಾರ್ಯತತ್ಪರರೂ ಆದ ವಿದ್ಯಾಸಾಗರರಿಗೆ ಮಾತ್ರ ಸಾಧ್ಯವಾಗುವಂತಹುದಾಗಿತ್ತು.

ಕಾಲೇಜಿನ ರಜೆಯ ದಿನಗಳಲ್ಲಿ ಹಳ್ಳಿಗಾಡಿನ ಪ್ರದೇಶಗಳಲ್ಲಿ ಹೋಗಿ ಅಲ್ಲಿ ಮಾದರಿ ಶಾಲೆಗಳನ್ನು ಆರಂಭಿಸುವ ಹಾಗೂ ಮೇಲ್ವಿಚಾರಣೆಯ ಕಾರ್ಯ ಕೈಕೊಳ್ಳುತ್ತಿದ್ದರು. ತಮ್ಮ ಅಧೀನದಲ್ಲಿದ್ದ ಪ್ರತಿಯೊಂದು ಜಿಲ್ಲೆಯಲ್ಲಿಯೂ ಅವರು ಐದು ಮಾದರಿ ಶಾಲೆಗಳನ್ನು ಆರಂಭಿಸಿದರು. ಹೀಗೆ ಒಟ್ಟು 20 ಹೊಸ ಶಾಲೆಗಳು ಆರಂಭವಾದವು. ಶಿಕ್ಷಣದ ಬಗ್ಗೆ ಬೀಸಿದ ಹೊಸ ಉತ್ಸಾಹದ ಗಾಳಿ ಹಳ್ಳಿಯ ಜನತೆಯನ್ನು ಚೇತರಿಸಿತು. ಅವರು ಶಾಲೆಯ ಕಟ್ಟಡದ ಖರ್ಚನ್ನು ತಾವೇ ವಹಿಸಕೊಳ್ಳಲು ಮುಂದಾದರು. ವಿದ್ಯಾಸಾಗರರು ಬೇಸರವಿಲ್ಲದೆ ಹಳ್ಳಿಯಿಂದ ಹಳ್ಳಿಗೆ ಕೆಲವು ಸಲ ಮೇಣೆಯಲ್ಲಿ, ಕೆಲವು ಸಲ ನಡೆದುಕೊಂಡೇ ಪ್ರವಾಸ ಮಾಡಿದರು. ಅವರಿಗೆ ತಮ್ಮ ಆರೋಗ್ಯ ಅಥವಾ ದೈಹಿಕ ಸುಖದ ಬಗ್ಗೆ ಪರಿವೆ ಇರುತ್ತಿರಲಿಲ್ಲ. ಹಾರ್ಡಿಂಜ್ ಶಾಲೆಗಳ ಯೋಜನೆಯ ವಿಫಲತೆಯ ಹಿನ್ನೆಲೆಯ ಸ್ಮರಣೆ ಅವರಿಗೆ ಸದಾ ಚುಚ್ಚುತ್ತಿತ್ತು. ಆದ್ದರಿಂದ ತಮ್ಮ ಶಾಲಾ ಯೋಜನೆಯನ್ನು ಯಶಸ್ವಿಗೊಳಿಸಿಯೇ ತೀರಬೇಕೆಂಬ ಛಲ ಅವರದಾಗಿತ್ತು. ಸರ್ವ ಸುದರ್ಪಣ ಭಾವದಿಂದ, ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪದ್ಧತಿಗೆ ಭದ್ರ ಅಡಿಪಾಯವನ್ನು ಹಾಕಿದರು. ಆ ಪದ್ಧತಿ ಅನೇಕ ಬದಲಾವಣೆಗಳನ್ನು ಹೊಂದುತ್ತ ಬಂದಿದೆ. ಅದರ ತಳಹದಿ ವಿಶಾಲವಾಗುತ್ತ ಬಂದಿದೆ. ಮುಂದೆ ಇನ್ನೂ ಹೆಚ್ಚು ವಿಶಾಲವಾಗುತ್ತ ನಡೆಯಲಿದೆ. ಮಾತೃ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣದ ಅನಿವಾರ್ಯ ಅವಶ್ಯಕತೆಯನ್ನು ಗುರುತಿಸಿ ಅದರ ಕಾರ್ಯಾಚರಣೆಗೆ ನಾಂದಿ ಹಾಕಿದವರು ವಿದ್ಯಾಸಾಗರರೇ. ನೂರು ವರ್ಷಗಳ ಹಿಂದೆ ಶಿಕ್ಷಣದ ಬೆಳಕು ಇನ್ನೂ ಮಸುಕಾಗಿರುವಾಗಲೇ ಈ ತಳಹದಿಯನ್ನು ಅವರು ಹಾಕಿದರು.

ಹಳ್ಳಿಗಳಲ್ಲಿ ಪ್ರವಾಸ ಮಾಡುತ್ತಿದ್ದಾಗ ವಿದ್ಯಾಸಾಗರರು ಹಳ್ಳಿಯವರೊಂದಿಗೆ ಬೆರೆತು ಅವರೊಂದಿಗೆ ಒಂದಾಗಿಬಿಡುತ್ತಿದ್ದರು. ಅವರ ಅವಶ್ಯಕತೆಗಳನ್ನು–ಹಣದ್ದೇ

ಆಗಿರಲಿ ಬೇರೆಯವೇ ಆಗಿರಲಿ-ಅವರೇ ಒದಗಿಸಿಬಿಡುತ್ತಿದ್ದರು. ಆದಾಯದಿಂದ ಅವರ ಹಣದ ಚೀಲ ಯಾವಾಗಲೂ ತೆರೆದೇ ಇರುತ್ತಿತ್ತು. ವಿದ್ಯಾಸಾಗರರ ಹೆಸರು ದೇಶದ ತುಂಬ ಗಾರುಡಿಗನ ಮಂತ್ರದಂತೆ ಜನರನ್ನು ಆಕರ್ಷಿಸತೊಡಿಗಿತು. ಇಂತಹ ಅಪಾರ ಕರುಣೆ ಪರೋಪಕಾರದ ಮಹಾಮಹಿಮರನ್ನು ನೋಡಿ ಗೌರವ ಸಲ್ಲಿಸಲು ಜನ ಅವರು ಹೋದ ಕಡೆಯೆಲ್ಲ ಬಹು ದೊಡ್ಡ ಸಂಖ್ಯೆಯಲ್ಲಿ ನೆರೆಯುತ್ತಿದ್ದರು.

ವಿದ್ಯಾಸಾಗರರಿಗೆ ವಿಶ್ರಾಂತಿಯೆಂಬುದೇ ಇರಲಿಲ್ಲ. ಅವರ ಆದರ್ಶಗಳಿಗೆ ಕೊನೆ ಎಂಬುದು ಇರಲಿಲ್ಲ. ಶಿಕ್ಷಣದ ಬಗ್ಗೆ ಅವರ ಅಸಕ್ತಿಗೆ ಎಣೆಯೇ ಇರಲಿಲ್ಲ. ದೇಶೀಯ ಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣ ಪ್ರಸಾರ ಮಾತ್ರ ಅಗುತ್ತಿರುವುದು ಅವರಿಗೆ ಸಮಾಧಾನ ತರಲಿಲ್ಲ. ಸ್ತ್ರೀ ಶಿಕ್ಷಣ ಕ್ಷೇತ್ರದಲ್ಲಿಯೂ ಆಗಲೇ ಅವರು ಪದಾರ್ಪಣೆ ಮಾಡಿದ್ದರು. ಸ್ತ್ರೀ ಶಿಕ್ಷಣ ಪ್ರಸಾರ ಕಾರ್ಯದಲ್ಲಿ ಬಹು ದೊಡ್ಡ ಪ್ರಮಾಣದಲ್ಲಿ ತುಂಬಿಕೊಳ್ಳಲು ಈಗ ಅವರಿಗೆ ಇನ್ನೂ ಒಂದು ಅವಕಾಶ ದೊರೆಯಿತು.

ಗಂಡು ಮಕ್ಕಳ ವಿದ್ಯಾಭ್ಯಾಸ ಪ್ರಸಾರಕ್ಕಾಗಿ ಡೇವಿಡ್ ಹೇರ್ ಮಾಡಿದ್ದನ್ನು ಜೆ.ಇ.ಡಿ. ಬೆತ್ಯೂನ್ ಅವರು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಮಾಡಿದರು. ಅಲ್ಲಲ್ಲಿ ಅನೇಕರು ಹೆಣ್ಣು ಮಕ್ಕಳ ಶಿಕ್ಷಣಕ್ಕಾಗಿ ಶ್ರಮಿಸಿದ್ದರು. ಆದರೆ ಬಂಗಾಲದಲ್ಲಿ ಸ್ತ್ರೀ ಶಿಕ್ಷಣದ ಭದ್ರ ತಳಹದಿ ಹಾಕಿದವರು ಬೆತ್ಯೂನರೇ ಎಂದು ಹೇಳಬೇಕು. 1849 ರಲ್ಲಿ ಅವರು ಆರಂಭಿಸಿ ನಂತರ ಅವರ ಹೆಸರೇ ಪಡೆದ ಹೆಣ್ಣು ಮಕ್ಕಳ ಶಾಲೆ ಸ್ತ್ರೀ ಶಿಕ್ಷಣದ ಕೇಂದ್ರಬಿಂದುವಾಗಿ ಪರಿಣಮಿಸಿತು. ಹೆಣ್ಣು ಮಕ್ಕಳನ್ನು ಅಜ್ಞಾನದ ಅಂಧಕಾರದಿಂದ ಹೊರಗೆ ತರಲು ನಡೆಸಿದ ಧರ್ಮ ಯುದ್ಧದಲ್ಲಿ ಬೆತ್ಯೂನ್‌ರಿಗೆ ಪ್ರಗತಿಶೀಲವಾದ ವಿದ್ಯಾಸಾಗರ ಹಾಗೂ ಮದನ್ ಮೋಹನ್ ತರ್ಕಾಲಂಕಾರ ಮುಂತಾದ ಮಹನೀಯರ ಪೂರ್ಣ ಬೆಂಬಲವಿದ್ದಿತು. 1850 ರಲ್ಲಿ ವಿದ್ಯಾಸಾಗರರು ಈ ಶಾಲೆಯ ಗೌರವ ಕಾರ್ಯದರ್ಶಿಗಳಾದರು.

1851 ರಲ್ಲಿ ಬೆತ್ಯೂನ್‌ರ ಮರಣ ವಿದ್ಯಾಸಾಗರರಿಗೆ ಒಂದು ದೊಡ್ಡ ಆಘಾತವುಂಟುಮಾಡಿತು. ಅದರಿಂದ ನಿರಾಶರಾಗದೇ ವಿದ್ಯಾಸಾಗರರು ಬೆತ್ಯೂನ್‌ರ ಆದರ್ಶ ಹಾಗೂ ಅವರ ವಿದ್ಯಾಭ್ಯಾಸ ಸಂಸ್ಥೆಗೆ ಹೆಚ್ಚು ಸಮರ್ಪಣೆಯ ಭಾವನೆಯನ್ನು ತಳೆದರು. ಶಾಲೆಯ ಆಡಳಿತವನ್ನು ಸರ್ಕಾರ ವಹಿಸಿಕೊಂಡಿತು. ಭಾರತ ಸರ್ಕಾರದ ಕಾರ್ಯದರ್ಶಿ ಸಿಸಿಲ್ ಬೀಡನ್ ಅವರ ಅಧ್ಯಕ್ಷತೆಯಲ್ಲಿ ಶಾಲೆಯ ಆಡಳಿತದ ಮೇಲ್ವಿಚಾರಣೆಗೆ ಒಂದು ಸಮಿತಿಯನ್ನು ನೇಮಿಸಲಾಯಿತು. ವಿದ್ಯಾಸಾಗರರು ಶಾಲೆಯ ಉತ್ಕರ್ಷೆಗಾಗಿ ಅನವರತ ಶ್ರಮಿಸತೊಡಗಿದರು. ಶಾಲೆಯ ವಾಹನ ಹಾಗೂ ಮೇಣೆಯ ಮೇಲೆ ಮನು ಸಂಹಿತೆಯಲ್ಲಿಯ "ಗಂಡು ಮಕ್ಕಳಂತೆ ಹೆಣ್ಣು ಮಕ್ಕಳು ಕೂಡಾ ಬಾಲ್ಯದಲ್ಲಿ ಪ್ರೀತಿಯ ಸಲಹುವಿಕೆ ಹಾಗೂ ಒಳ್ಳೆಯ

ಶಿಕ್ಷಣಕ್ಕೆ ಅರ್ಹರು" ಎಂಬ ವಾಕ್ಯವನ್ನು ಬರೆಸಿದರು. ಸ್ತ್ರೀ ಶಿಕ್ಷಣದ ಅವಶ್ಯಕತೆಯ ಬಗ್ಗೆ ಜನರಲ್ಲಿ ಜಾಗ್ರತೆ ಹುಟ್ಟಿಸುವುದೇ ಅವರ ಉದ್ದೇಶವಾಗಿತ್ತು. 1869 ರಲ್ಲಿ ಆ ಕಮಿಟಿ ಬರಖಾಸ್ತ ಆಗುವವರೆಗೆ ವಿದ್ಯಾಸಾಗರರು ಬಹಳ ಕಾಳಜಿಯಿಂದ ಈ ಸಂಸ್ಥೆಯನ್ನು ಪೋಷಿಸಿಕೊಂಡು ಬಂದರು.

1854 ರಲ್ಲಿ ಪ್ರಕಟವಾದ ಸರ್ ಛಾರ್ಲಸ್ ಉಡ್ ಅವರ ಎಜ್ಯೂಕೇಶನ್ ಡಿಸ್‌ಪ್ಯಾಚ್ ಎಂಬ ವರದಿ ಸ್ತ್ರೀ ಶಿಕ್ಷಣಕ್ಕೆ ಮತ್ತಷ್ಟು ಬೆಂಬಲ ಇತ್ತಿತ್ತು. ಬಹಳ ದಿನಗಳಿಂದ ಉಪೇಕ್ಷಿಸಲ್ಪಟ್ಟ ಈ ಶಿಕ್ಷಣದ ಸುಧಾರಣೆ ಬಗೆಗೆ ಹೊಸ ಆಶೆ ಮೂಡಿಸಿತು. ಈ ವಿಷಯದಲ್ಲಿ ಲೆಫ್ಟಿನೆಂಟ್ ಗವರ್ನರ್ ಹ್ಯಾಲಿಡ್ ವೈಯಕ್ತಿಕವಾಗಿ ಬಹಳ ಆಸ್ಥೆ ವಹಿಸಿದರು. ಬೆತ್ಯೂನ್‌ರು ಈ ಕಾರ್ಯವನ್ನು ಎಲ್ಲಿ ನಿಲ್ಲಿಸಿದ್ದರೋ ಅಲ್ಲಿಂದ ಮುಂದೆ ವಿದ್ಯಾಸಾಗರರು ಅದನ್ನು ಮುಂದುವರಿಸಿಕೊಂಡು ಹೋಗಿ ಅದನ್ನು ವಿಸ್ತರಿಸಲು ಆಸಕ್ತರಾಗಿದ್ದರು. ಹ್ಯಾಲಿಡ್ ಅವರ ಮೌಖಿಕ ಆಜ್ಞೆಯ ಮೇರೆಗೆ 1857-58 ರಲ್ಲಿ ಅವರು ತಮ್ಮ ಜಿಲ್ಲೆಯಲ್ಲಿ ಗಂಡು ಮಕ್ಕಳಿಗಾಗಿ ಶಾಲೆ ಆರಂಭಿಸಿದಂತೆ ಹೆಣ್ಣು ಮಕ್ಕಳ ಶಾಲೆಗಳನ್ನೂ ಆರಂಭಿಸತೊಡಗಿದರು. ಸರ್ಕಾರದ ಒಪ್ಪಿಗೆ ಹಾಗೂ ಆರ್ಥಿಕ ನೆರವನ್ನು ನಿರೀಕ್ಷಿಸದೆ ಈ ಸಂಸ್ಥೆಗಳನ್ನು ಅವರು ಆರಂಭಿಸಿದರು.

ಗಂಡು ಮಕ್ಕಳ ಶಿಕ್ಷಣಕ್ಕಿಂತ ಹೆಣ್ಣು ಮಕ್ಕಳ ಶಿಕ್ಷಣ ಹೆಚ್ಚು ಜವಾಬ್ದಾರಿಯ ಕೆಲಸ. ಇದಲ್ಲದೆ, ಅನೇಕರ ಕಟುವಿರೋಧವನ್ನು ವಿದ್ಯಾಸಾಗರರು ಎದುರಿಸಬೇಕಾಯಿತು. ಶತಮಾನಗಳ ಮೌಢ್ಯ ಜನತೆಯಲ್ಲಿ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ವಿರೋಧವನ್ನು ಹೆಚ್ಚಿಸಿ ಅವರು ಅಜ್ಞಾನಿಗಳಾಗಿ ಮನೆಯ ಹೊಸ್ತಿಲಿನ ಹಿಂದೆಯೇ ಇರುವ ಜೀವನಕ್ಕೆ ಅವರನ್ನು ಎರವು ಮಾಡಿತ್ತು. ಇಂಥ ನಿರ್ದಯ ಸಮಾಜದಲ್ಲಿ ನಿರಂತರ ಕೆಳಮಟ್ಟದ ಸ್ಥಾನವನ್ನು ಅಂಗೀಕರಿಸಿ, ಮನೆಯಲ್ಲಿ ಹಾಕಿದ್ದನ್ನು ತಿಂದು ಬಿದ್ದಿರುವ ನಾಯಿಯಂತೆ ಆಕೆ ಬದುಕಿರಬೇಕಾಗಿತ್ತು. ಬೇರೂರಿದ್ದ ಆ ವಿಚಾರದ ವಿರುದ್ಧ ಅವರು ಹೋರಾಡಬೇಕಾಗಿತ್ತು. ಅದೇನು ಸಾಮಾನ್ಯ ಕೆಲಸವಾಗಿರಲಿಲ್ಲ. ವಿದ್ಯಾಸಾಗರರು ಸ್ತ್ರೀ ಶಿಕ್ಷಣದಲ್ಲಿ ಅಚಲ ಶ್ರದ್ಧೆಯುಳ್ಳವರಾಗಿದ್ದರಲ್ಲದೆ, ಅದನ್ನು ಸಾಧಿಸದೆ ಸಾಮಾಜಿಕ ಪ್ರಗತಿ ಅಸಾಧ್ಯವೆಂದು ಅವರು ದೃಢವಾಗಿ ನಂಬಿದ್ದರು. ಅವರು ಸಾಧ್ಯವಾದಾಗಲೆಲ್ಲ ಹೆಣ್ಣು ಮಕ್ಕಳ ಶಾಲೆಗಳನ್ನು ಸ್ಥಾಪಿಸುತ್ತ ಹೋದರಲ್ಲದೆ, ಸುಶಿಕ್ಷಿತ ಹೆಣ್ಣು ಮಕ್ಕಳಿಂದ ಸಮಾಜಕ್ಕೆ ಆಗುವ ಅನೇಕ ಲಾಭಗಳ ಬಗ್ಗೆ ತಿಳಿಯಪಡಿಸಿ ಜನರನ್ನು ಜಾಗೃತಗೊಳಿಸುತ್ತ ಹೋಗುತ್ತಿದ್ದರು. ಈ ಉದಾತ್ತ ಕಾರ್ಯದಲ್ಲಿ ವಿದ್ಯಾಸಾಗರರು ಜನತೆಯ ವಿರೋಧ, ಅಪಹಾಸ್ಯ ಹಾಗೂ ಟೀಕೆಗಳಿಗೆ ಗುರಿಯಾಗಬೇಕಾಗುತ್ತಿತ್ತು. ಸ್ತ್ರೀ ಶಿಕ್ಷಣ ಹೆಣ್ಣು ಮಕ್ಕಳ ನೈತಿಕ ಅಧಃಪತನಕ್ಕೆ ಕಾರಣವಾಗುವದೆಂದು ಅನೇಕರು ವಿದ್ಯಾಸಾಗರರ ಪ್ರಯತ್ನಗಳನ್ನು ತಡೆಯುತ್ತಿದ್ದರು. ಹಲವಾರು ಅಪವಾದಗಳ ಹೊರೆಯನ್ನೇ ಅವರು ವಿದ್ಯಾಸಾಗರರ ಮೇಲೆ ಹೊರಿಸುತ್ತಿದ್ದರು. ಆದರೆ ಸ್ತ್ರೀ

ಶಿಕ್ಷಣದ ಅನಿವಾರ್ಯ ಅವಶ್ಯಕತೆಯ ಬಗ್ಗೆ ಸಮಾಜದಲ್ಲಿ ಕ್ರಿಯಾಶೀಲ ಜಾಗ್ರತೆಯನ್ನುಂಟುಮಾಡಲು ವಿದ್ಯಾಸಾಗರರು ಅನವರತ ಯತ್ನಿಸುವುದರಲ್ಲಿಯೆ ಮುಂದುವರೆದರು.

ಹೊಸದಾಗಿ ಸ್ಥಾಪಿತವಾದ ಶಾಲೆಗಳ ಆರ್ಥಿಕ ಹೊಣೆಯನ್ನು ಸರ್ಕಾರ ವಹಿಸುವುದೆಂಬ ಭರವಸೆಯಿಂದ ವಿದ್ಯಾಸಾಗರರು ಹೆಚ್ಚು ಹೆಚ್ಚು ಹೆಣ್ಣು ಮಕ್ಕಳ ಶಾಲೆಗಳನ್ನು ಆರಂಭಿಸುತ್ತಲೇ ನಡೆದರು. ನವೆಂಬರ್ 1857 ರಿಂದ ಮೇ 1858 ರಷ್ಟರಲ್ಲಿ ಅವರು 35 ಹೆಣ್ಣು ಮಕ್ಕಳ ಶಾಲೆಗಳನ್ನು ಆರಂಭಿಸಿದ್ದರು. ಇವುಗಳಲ್ಲಿ 1300 ವಿದ್ಯಾರ್ಥಿನಿಯರು ಅಭ್ಯಾಸ ಮಾಡುತ್ತಿದ್ದರು.

ಈ ಶಾಲೆಗಳಲ್ಲಿ ವಿದ್ಯಾರ್ಥಿನಿಯರಿಗೆ ಉಚಿತವಾಗಿ ವಿದ್ಯಾಭ್ಯಾಸ ಕೊಡಲಾಗುತ್ತಿತ್ತು. ಬಹುತೇಕ ಶಾಲೆಗಳ ಕಟ್ಟಡದ ವೆಚ್ಚವನ್ನು ಸ್ಥಳೀಯ ಜನರೇ ವಹಿಸಿದ್ದರು. ಆದರೆ ಅವುಗಳ ದಿನನಿತ್ಯದ ಖರ್ಚು ಮತ್ತು ಸಿಬ್ಬಂದಿ ವೇತನ ವೆಚ್ಚಕ್ಕಾಗಿ ಅವುಗಳಿಗೆ ಸರ್ಕಾರದ ಅನುದಾನದ ಅವಶ್ಯಕತೆಯಿದ್ದಿತು. ವಿದ್ಯಾಸಾಗರರು ಯಾವುದೇ ಹೊಸ ಶಾಲೆ ಆರಂಭವಾದೊಡನೆ ಆಗಿನ ಡಿ.ಪಿ.ಐ. ಅವರಿಗೆ ಶಾಲೆಯ ಆರಂಭದ ಸುದ್ದಿಯನ್ನು ತಿಳಿಸಿ ಸರ್ಕಾರದ ಅನುದಾನಕ್ಕಾಗಿ ವಿನಂತಿ ಸಲ್ಲಿಸುತ್ತಿದ್ದರು. ಸ್ತ್ರೀ ಶಿಕ್ಷಣವನ್ನು ಬೆಂಬಲಿಸಿ ಅದಕ್ಕೆ ಹೆಚ್ಚಿನ ಹಣದ ಸಹಾಯ ಕೊಡಬೇಕೆಂದು 1858ರ ವುಡ್ಸ್ ಡಿಸ್ಪಾಚ್ ಶಿಫಾರಸ್ಸು ಮಾಡಿದ್ದರೂ, ಅಂದಿನ ಸರ್ಕಾರ, ಅನುದಾನದ ನಿಯಮಗಳನ್ನು ಬದಲಾಯಿಸಿ ಈ ಶಾಲೆಗಳಿಗೆ ಧನ ಸಹಾಯ ನೀಡಲು ನಿರಾಕರಿಸಿತು. ಸ್ತ್ರೀ ಶಿಕ್ಷಣದ ಬಗ್ಗೆ ಅದು ಅತ್ಯಂತ ನಿರಾಸಕ್ತಿಯನ್ನು ತೋರಿಸಿದ್ದಲ್ಲದೆ, ಸಾರ್ವಜನಿಕರಿಂದ ಇವುಗಳಿಗೆ ಸಾಕಷ್ಟು ಧನಸಹಾಯ ಬರದೆ ಇದ್ದ ಪಕ್ಷದಲ್ಲಿ ಇಂತಹ ಶಾಲೆಗಳನ್ನು ಆರಂಭಿಸದೆ ಇರುವುದೇ ಒಳ್ಳೆಯದೆಂಬ ಧೋರಣೆಯನ್ನು ತಳೆಯಿತು. ಇದು ವಿದ್ಯಾಸಾಗರರಿಗೆ ಬಹಳ ದೊಡ್ಡ ಆಘಾತವನ್ನುಂಟುಮಾಡಿತು. ಬಂಗಾಲದ ಹಳ್ಳಿಗಾಡಿನಲ್ಲಿ ಹಚ್ಚಿದ ದೀಪದ ಸಾಲು ಆರಿಹೋಗಿ, ಹಳ್ಳಿಗಳನ್ನು ಆವರಿಸಿದ ಕತ್ತಲು ಮೊದಲಿಗಿಂತ ಹೆಚ್ಚು ಗಾಢವಾಗುವದೆಂಬ ಹೆದರಿಕೆ ಅವರಿಗೆ ಉಂಟಾಯಿತು. ಸರ್ಕಾರ ಈ ಖರ್ಚಿನ ಹಣವನ್ನು ಕೊಡದೆ ಹೋದರೆ, ಈ ಶಾಲೆಗಳಿಗಾಗಿ ವಿನಿಯೋಗಿಸಲಾದ ಸುಮಾರು 3,500 ರೂಪಾಯಿಗಳ ಖರ್ಚನ್ನು ತಾವೇ ವಹಿಸಿಕೊಳ್ಳಲು ವಿದ್ಯಾಸಾಗರರು ಮುಂದಾದರು.

ವಿದ್ಯಾಸಾಗರರು ಈ ಬಗ್ಗೆ ಮೇಲಿಂದ ಮೇಲೆ ಮಾಡಿಕೊಂಡ ಮನವಿಗಳಿಗೆ ಸರ್ಕಾರದ ಪ್ರತಿಕ್ರಿಯೆ ನಿರಾಶೆಯನ್ನುಂಟುಮಾಡುವಂಥದೇ ಆಗಿದ್ದಿತು. ಹ್ಯಾಲಿಡ್ ಸ್ವತಃ ಸಹಾನುಭೂತಿಯುಳ್ಳವರಾಗಿದ್ದರು. ಸರ್ಕಾರದ ಕಟ್ಟುನಿಟ್ಟಿನ ಧೋರಣೆಯಿಂದಾಗಿ ಅವರು ಅಸಹಾಯಕರಾಗಿದ್ದರು. ಅವರು ವಿದ್ಯಾಸಾಗರರಿಗೆ ಸ್ವತಃ ತಮ್ಮ ಮೇಲೆಯೇ ದಾವೆ ಮಾಡಿ ಈ ಹಣವನ್ನು ವಸೂಲು ಮಾಡಿಕೊಳ್ಳಲು ಪ್ರಯತ್ನಿಸಬೇಕೆಂದು ಸೂಚಿಸಿದರು. ಆದರೆ ಇಂತಹ ಸಣ್ಣತನಕ್ಕೆ ಇಳಿಯಲು ವಿದ್ಯಾಸಾಗರರ ಮನಸ್ಸು

ಒಪ್ಪಲಿಲ್ಲ. 1857 ರ ಸ್ವಾತಂತ್ರ್ಯ ಸಂಗ್ರಾಮ ಎಲ್ಲೆಡೆ ಬಹಳ ಖರ್ಚಿಗೆ ಎಡೆ ಮಾಡಿತ್ತು. ಆದಕಾರಣ ಎಂತಹ ಒಳ್ಳೇ ಕಾರ್ಯಕ್ಕೂ ಸರಕಾರ ಹಣವನ್ನು ಖರ್ಚು ಮಾಡಲು ಮನಸ್ಸು ಮಾಡುತ್ತಿರಲಿಲ್ಲ. ಅನೇಕ ದಿನಗಳ ಪ್ರಯತ್ನಗಳ ನಂತರ, ವಿದ್ಯಾಸಾಗರರು ಅಲ್ಲಿಯವರೆಗೆ ಇದಕ್ಕಾಗಿ ಮಾಡಿದ ಖರ್ಚಿನ ಹಣವನ್ನು ಮಾತ್ರ ಒದಗಿಸಲು ಒಪ್ಪಿಗೆ ಇತ್ತಿತು. ಅದಕ್ಕಿಂತ ಹೆಚ್ಚಿನ ಕಾರ್ಯ ಮಾಡಲು ಸರಕಾರ ಯಾವ ಉತ್ಸುಕತೆಯನ್ನೂ ತೋರಿಸಲಿಲ್ಲ.

ಇದು ವಿದ್ಯಾಸಾಗರರಿಗೆ ಎಂಥ ನಿರಾಶೆಯನ್ನು ಉಂಟುಮಾಡಿತು ಎಂಬುದನ್ನು ನಾವು ಊಹಿಸಬಹುದು. ಆದರೆ ಎಂತಹ ಪ್ರತಿಕೂಲ ಪರಿಸ್ಥಿತಿ ಕಂಡುಬಂದರೂ ಅವರು ವಿಚಂಚಿತರಾಗಲಿಲ್ಲ. ಪ್ರತಿಕೂಲ ಪರಿಸ್ಥಿತಿಗೆ ಅಂಜಿ ಸೋಲನ್ನೊಪ್ಪಿಕೊಂಡು ಕೂತುಕೊಳ್ಳುವ ವ್ಯಕ್ತಿ ಅವರಾಗಿರಲಿಲ್ಲ. ಅವರು ಈ ಸಂಸ್ಥೆಗಳನ್ನು ಉಳಿಸಲು ಸಾರ್ವಜನಿಕರಿಗೆ ದೇಣಿಗೆ ಸಂಗ್ರಹಣೆಯ ಕಾರ್ಯಕ್ಕಾಗಿ, ಅನೇಕ ಭಾರತೀಯ ಮುಖಂಡರ ಸಹಾಯ ಕೋರಿದರು. ಸೆಸಿಲ್ ಬೀಡನ್‌ನಂಥ ಸರಕಾರಿ ಅಧಿಕಾರಿಗಳು, ಅಂದಿನ ಗವರ್ನರ್ ಜನರಲ್‌ರ ಹೆಂಡತಿ ಲೇಡಿ ಕ್ಯಾನಿಂಗ್‌ರಂಥ ಪರದೇಶದ ಮಹನೀಯರು ಕೂಡ ದೇಣಿಗೆಯಿತ್ತು ಈ ಕಾರ್ಯದಲ್ಲಿ ನೆರವಾದರು.

ವಿದ್ಯಾಸಾಗರರು ಆರಂಭಿಸಿದ ಈ ಉದಾತ್ತ ಯೋಜನೆ ಸರಕಾರದ ಅನಾಸ್ಥೆಯಿಂದ ಕೆಲಕಾಲ ಕುಂಠಿತವಾಯಿತೇನೋ ನಿಜ. ಆದರೆ ಅವರು ತಮ್ಮ ಸೋಲರಿಯದ ಪ್ರಯತ್ನಗಳಿಂದ ಸ್ತ್ರೀ ಶಿಕ್ಷಣದ ಬಗ್ಗೆ ಸಮಾಜದಲ್ಲಿ ಬೇರೂರಿದ್ದ ದುರಾಗ್ರಹಗಳ ವಿರುದ್ಧ ಹೋರಾಡಿ, ಸಮಾಜದಲ್ಲಿ ಹೊಸ ಜಾಗ್ರತೆಯನ್ನುಂಟುಮಾಡಿ, ದೇಶದ ಶೈಕ್ಷಣಿಕ ಪ್ರಗತಿಯ ಪಥದಲ್ಲಿ ಅಚ್ಚಳಿಯದ ಸೇವೆಯ ಕುರುಹುಗಳನ್ನು ಬಿಟ್ಟು ಹೋದರು; ಅವಿಸ್ಮರಣೀಯ ಕಾರ್ಯಗಳ ದಾಖಲೆಗಳನ್ನು ನಿರ್ಮಿಸಿ ಹೋದರು. ತಾವು ಯೋಜಿಸಿದ ಸುಧಾರಣೆಗಳ ಬಗ್ಗೆ ವಿದ್ಯಾಸಾಗರರು ಎಷ್ಟೊಂದು ಉತ್ಸಾಹವುಳ್ಳವರಾಗಿದ್ದರೆಂಬುದಕ್ಕೆ ಅನೇಕ ಉದಾಹರಣೆಗಳನ್ನು ಕಾಣಬಹುದು. ಈ ಸಂದರ್ಭದಲ್ಲಿ ಹಲವು ದೃಷ್ಟಿಯಿಂದ ಮಹತ್ತರವಾದ ಒಂದು ಘಟನೆಯನ್ನು ಸ್ಮರಿಸಬಹುದು. ಈ ಘಟನೆ ವಿದ್ಯಾಸಾಗರರ ಈ ಸುಧಾರಣೆಗಳ ಬಗ್ಗೆ ಎಂಥ ಛಲ ಹಾಗೂ ತೀವ್ರ ಆಗಬೇಕೆಂಬ ಬಗ್ಗೆ ಆಸಕ್ತಿಯುಳ್ಳವರಾಗಿದ್ದರು. ಎಷ್ಟೊಂದು ವ್ಯಾವಹಾರಿಕ ದೃಷ್ಟಿಯುಳ್ಳವರಾಗಿದ್ದರೆಂಬುದಕ್ಕೆ ಉದಾಹರಣೆಯಾಗಿದೆ. ಭಾರತವನ್ನು ಬಹುವಾಗಿ ಪ್ರೀತಿಸಿದ ಉದಾರ ಮನಸ್ಸಿನ ಶ್ರೀಮಂತ ಮನೆತನದ ಕುಮಾರಿ ಮೇರಿ ಕಾರ್ಪೆಂಟರ್ ಎಂಬುವರು 1866 ರ ಕೊನೆಯಲ್ಲಿ ಭಾರತಕ್ಕೆ ಬಂದರು. ಅವರೊಂದಿಗೆ ದಿನಗಳೆದಂತೆ ವಿದ್ಯಾಸಾಗರರ ಒಡನಾಟ ಬೆಳೆಯುತ್ತ ಬಂದಿತು. ಭಾರತದಲ್ಲಿ ಸ್ತ್ರೀ ಶಿಕ್ಷಣ ಪ್ರಸಾರದಲ್ಲಿ ಆಸಕ್ತರಾಗಿದ್ದ ಅವರು, ಸ್ತ್ರೀ ಶಿಕ್ಷಕಿಯರನ್ನು ತರಬೇತಿಗೊಳಿಸಲು ಒಂದು ಸಂಸ್ಥೆಯನ್ನು ಬೆಥ್ಯೂನ್ ಶಾಲೆಯಲ್ಲಿ ಆರಂಭಿಸಬೇಕೆಂದು ಸೂಚಿಸಿದರು. ಸ್ವಾಭಾವಿಕವಾಗಿ, ಇದರ ಬಗ್ಗೆ ವಿದ್ಯಾಸಾಗರರ ಅಭಿಪ್ರಾಯ

ಕೇಳಲಾಯಿತು. ವಿದ್ಯಾಸಾಗರರು ಇದರ ಬಗ್ಗೆ ಎಷ್ಟೇ ಉತ್ಸಾಹವುಳ್ಳವರಾಗಿದ್ದರೂ ವ್ಯಾವಹಾರಿಕ ದೃಷ್ಟಿಯಿಂದ ಅವರು ಸಮಸ್ಯೆಗಳನ್ನು ಕೂಲಂಕುಷವಾಗಿ ವಿವೇಚಿಸುತ್ತಿದ್ದರು. ಬಹಳಷ್ಟು ವಿಚಾರಿಸಿ ವಿದ್ಯಾಸಾಗರರು ಶಾಲೆಯ ಆರಂಭದ ಬಗ್ಗೆ ವ್ಯತಿರಿಕ್ತವಾದ ಅಭಿಪ್ರಾಯ ಕೊಟ್ಟರು. ತಾವು ಸ್ತ್ರೀ ಶಿಕ್ಷಣದ ಬಗ್ಗೆ ಅತ್ಯಂತ ಆಸಕ್ತಿಯುಳ್ಳವರಾಗಿದ್ದರೂ ಇದು ಸಾರ್ವಜನಿಕ ಅಭಿಪ್ರಾಯಕ್ಕೆ ವಿರೋಧವಾಗಿರುವುದರಿಂದ, ಇಂಥ ಕ್ರಮ ಈ ಉದ್ದೇಶಕ್ಕೆ ವ್ಯತಿರಿಕ್ತವಾದ ಪರಿಣಾಮವನ್ನುಂಟುಮಾಡಿ, ಈ ಯೋಜನೆ ವಿಫಲವಾಗಬಹುದೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಆಗಿನ ಸಮಾಜ ಇಷ್ಟೊಂದು ಹಳೆಯ ವಿಚಾರದ್ದಾಗಿದ್ದುದರಿಂದ, ಯಾರೂ ತಮ್ಮ ಬೆಳೆದ ಹೆಣ್ಣು ಮಕ್ಕಳನ್ನು ಶಿಕ್ಷಕಿಯರ ತರಬೇತಿಗೆ ಕಳಿಸಲಿಕ್ಕಿಲ್ಲವೆಂದು ಅವರು ಅಭಿಪ್ರಾಯಪಟ್ಟರು. ಒಂದು ಉದಾತ್ತವಾದ ಧ್ಯೇಯ ಅತೀ ಉತ್ಸುಕತೆಯಿಂದ ವಿಫಲಗೊಳ್ಳಬಾರದೆಂಬುದೇ ವಿದ್ಯಾಸಾಗರರ ನಿಲುವಾಗಿತ್ತು. ಸ್ತ್ರೀ ಶಿಕ್ಷಣದ ಬಗ್ಗೆ ಅವರು ಅಷ್ಟೊಂದು ಆಸಕ್ತರಾಗಿದ್ದರಿಂದಲೇ ಅವರು ಈ ಉಪಕ್ರಮದ ಬಗ್ಗೆ ಅಷ್ಟೊಂದು ಎಚ್ಚರಿಕೆಯಿಂದ ಮುಂದುವರಿಯುತ್ತಿದ್ದರು. ವಿದ್ಯಾಸಾಗರರ ಮುಂಧೋರಣೆ ಕೊನೆಗೂ ಸರಿಯಾದದ್ದೆಂದು ಕಂಡುಬಂದಿತು. ನಾರ್ಮಲ್ ಸ್ಕೂಲನ್ನು ಆರಂಭಿಸಲಾಯಿತು. ಆದರೆ ಅದು ಯಶಸ್ವಿಯಾಗಲಿಲ್ಲ.

ಈಶ್ವರಚಂದ್ರ ವಿದ್ಯಾಸಾಗರರ ಜೀವನದಲ್ಲಿ ಇನ್ನೊಂದು ದುಃಖದ ಘಟನೆ ನಡೆಯಿತು. ಅದೊಂದು ದುರ್ಭಾಗ್ಯದ ಘಟನೆ. ಬೇರೆ ಬೇರೆ ಸ್ಥಳಗಳಲ್ಲಿಯ ಹೆಣ್ಣು ಮಕ್ಕಳ ಶಾಲೆಗಳ ಮೇಲ್ವಿಚಾರಣೆಗೆ ಕಾರ್ಪೆಂಟರರು ಭೇಟಿ ನೀಡುತ್ತಿದ್ದರು. ಕಾರ್ಪೆಂಟರರ ಅಪೇಕ್ಷೆಯ ಮೇರೆಗೆ ವಿದ್ಯಾಸಾಗರರು ಅವರೊಂದಿಗೆ ಹೋಗುತ್ತಿದ್ದರು. ಒಂದು ಸಲ ಉತ್ತರಪುರ ಶಾಲೆಯ ಸಂದರ್ಶನಕ್ಕೆಂದು ಅವರೀರ್ವರೂ ಹೊರಟಿದ್ದರು. ಬ್ಯಾಲಿಯಿಂದ ಟ್ರಾಮಿನಲ್ಲಿ ಹೊರಟ ಅವರು ಬೇರೆ ಬೇರೆ ಡಬ್ಬಿಗಳಲ್ಲಿ ಕುಳಿತರು. ವಿದ್ಯಾಸಾಗರರು ಕುಳಿತ 'ಡಬ್ಬಿ' ಅಪಘಾತಕ್ಕೀಡಾಗಿ ಮುಗುಚಿಬಿತ್ತು. ವಿದ್ಯಾಸಾಗರರಿಗೆ ತೀವ್ರ ಗಾಯಗಳಾಗಿ ಅವರು ಸ್ಮೃತಿ ತಪ್ಪಿ ಬಿದ್ದುಬಿಟ್ಟರು. ಆಗ ಮಿಸ್ ಕಾರ್ಪೆಂಟರ್ ಅವರು ಅವರನ್ನು ಮನೆಗೆ ಸಾಗಿಸಿ ಆರೈಕೆ ಮಾಡಿದರು. ಅನೇಕ ಸಲ ವಿದ್ಯಾಸಾಗರರು, ಮಿಸ್ ಕಾರ್ಪೆಂಟರರು ತಮಗೆ ನೀಡಿದ ಶುಶ್ರೂಷೆಯನ್ನು ನೆನೆಯುತ್ತಿದ್ದರು. ಅವರು ಮಾತೃ ಹೃದಯದ ಹೆಣ್ಣು ಮಗಳೆಂದು ಬಣ್ಣಿಸುತ್ತಿದ್ದರು. ಈ ಅಪಘಾತ ಅವರ ಅನ್ನಕೋಶಕ್ಕೆ ಹೆಚ್ಚಿನ ಗಾಯವನ್ನುಂಟುಮಾಡಿತು. ಆ ಗಾಯ ಕೊನೆಯವರೆಗೂ ಪೂರ್ತಿಯಾಗಿ ಮಾಗಲೇ ಇಲ್ಲ. ಅವರ ಆರೋಗ್ಯ ಸಂಪೂರ್ಣವಾಗಿ ಚೇತರಿಸಿಕೊಳ್ಳಲೇ ಇಲ್ಲ.

# 4. ವಿಧವೆಯರ ಕಷ್ಟಪರಿಹಾರ

ವಿದ್ಯಾಸಾಗರರ ಜೀವನದ ಅತಿ ದೊಡ್ಡ ಸಾಧನೆಯೆಂದರೆ ವಿಧವಾ ವಿವಾಹವನ್ನು ಕಾನೂನಿನ ದೃಷ್ಟಿಯಲ್ಲಿ ಕ್ರಮಬದ್ಧಗೊಳಿಸಿದ್ದು. ವಿದ್ಯಾಸಾಗರರ ಜೀವನದ ಎಲ್ಲಾ ಮಹತ್ವ ಸಾಧನೆಗಳ ಪೈಕಿ ಇದು ಅತ್ಯಂತ ಹೆಚ್ಚು ಮಹತ್ವದ್ದಾಗಿದ್ದು ಅವರಿಗೆ ಅಮರವಾದ ಹೆಗ್ಗಳಿಕೆ ಗಳಿಸಿಕೊಟ್ಟಿತು.

ಆಧುನಿಕ ಭಾರತದ ಇತಿಹಾಸದಲ್ಲಿ ಸಮಾಜ ಸುಧಾರಣೆಯ ಆರಂಭ ರಾಜಾರಾಮ ಮೋಹನರಾಯರ ಕಾಲದಿಂದಲೇ ಆರಂಭವಾಯಿತೆಂದು ಹೇಳಬಹುದು. ಅವರನ್ನು ಆಧುನಿಕ ಭಾರತದ ಪಿತಾಮಹರೆಂದು ಕರೆಯುವುದು ಔಚಿತ್ಯಪೂರ್ಣವಾಗಿದೆ. ಭಾರತದಲ್ಲಿ ಸತಿಪದ್ಧತಿಯನ್ನು ತೊಡೆದುಹಾಕಲು ಕಾರಣರಾದವರೂ ಅವರೇ. ಅವರು ಬ್ರಹ್ಮೋ ಸಮಾಜದ ಪ್ರವರ್ತಕರೂ ಆಗಿದ್ದರು. ಆ ಸಂಸ್ಥೆ ಅನೇಕ ದಶಕಗಳವರೆಗೆ ಭಾರತದ ಎಲ್ಲ ಪ್ರಗತಿಪರ ಚಳುವಳಿಗಳ ಮುಂಚೂಣಿಯಲ್ಲಿದ್ದಿತು. ಈ ಮಹತ್ವದ ಘಟನೆಗಳು ನಡೆಯುತ್ತಿದ್ದಾಗ ವಿದ್ಯಾಸಾಗರರಿಗೆ ಇನ್ನೂ 8-10 ವರ್ಷ. ರಾಜಾರಾಮ ಮೋಹನರಾಯರು ಅರ್ಧ ಪೂರ್ತಿಗೊಳಿಸಿದ್ದ ಕಾರ್ಯವನ್ನು ಮುಂದುವರಿಸಿಕೊಂಡುಹೋಗುವ ಇಂಥ ದೊಡ್ಡ ಹೊಣೆ ಮತ್ತು ಅವಕಾಶವನ್ನು ಇತಿಹಾಸ ಮುಂದೆ ಒಂದು ದಿನ ಅವರಿಗೆ ಒದಗಿಸೀತೆಂಬುದರ ಅರಿವು ಕೂಡ ವಿದ್ಯಾಸಾಗರರಿಗೆ ಇರಲಿಲ್ಲ.

ಕಾಲ ಕಳೆದಂತೆ ಸಮಾಜದಲ್ಲಿ ಈ ಸಮಸ್ಯೆಗಳ ಬಗ್ಗೆ ಪ್ರಜ್ಞೆ ರೂಪುಗೊಳ್ಳುತ್ತಿತ್ತು. ವಿದ್ಯಾಸಾಗರರ ಜೀವನದ ಬಹುಭಾಗ ಅವರ ತಲೆ ತಿನ್ನುತ್ತಿದ್ದ ಬಲಾತ್ಕಾರದ ವಿಧವಾ ಜೀವನ ಹಾಗೂ ಬಹುಪತ್ನಿತ್ವದ ಸಮಸ್ಯೆಗಳು ಆಗಲೇ ತೀಕ್ಷ್ಣ ಬುದ್ಧಿಯ ಹಾಗು ವಿಚಾರಶೀಲರಾದ ರಾಮಮೋಹನರ ಮನಸ್ಸನ್ನು ಕೆಣಕತೊಡಗಿದ್ದವು. ಆದರೆ ಅವುಗಳ ಬಗ್ಗೆ ಕಾರ್ಯೋನ್ಮುಖರಾಗಲು ಅವರಿಗೆ ಸಮಯ ದೊರೆತಂತೆ ಕಾಣಲಿಲ್ಲ. ಈ ಮಧ್ಯೆ 'ಡೆರೋಝಿಯನ್ಸ್' ಅಥವಾ 'ಯಂಗ್ ಬೆಂಗಾಲ್' ಎಂದು ಕರೆಯಲ್ಪಡುವ ಒಂದು ಗುಂಪು ಈ ಸಮಸ್ಯೆಗಳ ಬಗ್ಗೆ ಚರ್ಚೆ ಆರಂಭಿಸಿತು. ಬಂಗಾಲದ ಬುದ್ಧಿಜೀವಿಗಳು ಈ ಸಮಾಜಿಕ ಅನಿಷ್ಟಗಳ ಬಗೆಗೆ ಆಸಕ್ತಿಯುಳ್ಳವರಾಗಿದ್ದರು ಮತ್ತು ಅವುಗಳನ್ನು ತೊಡೆದುಹಾಕುವ ಬಗ್ಗೆ ಸಾರ್ವಜನಿಕ ಚರ್ಚೆಗಳು ಅಲ್ಲಲ್ಲಿ ಆರಂಭವಾಗಿದ್ದವು.

ದೇವೇಂದ್ರನಾಥ ಟಾಗೋರರ ಆಶ್ರಯದಲ್ಲಿ ಆರಂಭವಾದ ತತ್ವಬೋಧಿನಿ

ಸಭಾ ಹಾಗೂ ತತ್ವಬೋಧಿನಿ ಪತ್ರಿಕಾ ಕಳೆದ ಶತಮಾನದ ಐದನೆಯ ದಶಕದ ಮಹತ್ವ ಸಾಧನೆಗಳಾಗಿ ಪರಿಣಮಿಸಿದುವು. ಆ ಸಂಸ್ಥೆಗಳು ತಳೆದ ಪ್ರಗತಿಪರ ವಿಚಾರಗಳು ಬಂಗಾಲದ ಸುಶಿಕ್ಷಿತ ಸಮಾಜದ ಅಭಿಪ್ರಾಯಗಳನ್ನು ರೂಪಿಸುವಲ್ಲಿ ಬಹಳ ಪರಿಣಾಮಕಾರಿಯಾಗಿದ್ದವು. ರಾಮಮೋಹನರು ಆರಂಭಿಸಿದ ಸಾಮಾಜಿಕ ಕ್ರಾಂತಿಯ ವಾತಾವರಣಕ್ಕೆ ಅವು ಪೂರಕವಾಗಿದ್ದವು. ತತ್ವಬೋಧಿನಿ ಪತ್ರಿಕೆಯ ಸಂಪಾದಕರಾಗಿದ್ದ ಅಕ್ಷಯಕುಮಾರ ದತ್ತ ಅವರು ಅಚಲವಾದ ಬುದ್ಧಿ ಪ್ರಾಮಾಣಿಕತಾವಾದಿಯಾಗಿದ್ದರಲ್ಲದೆ ಒಳ್ಳೇ ಗದ್ಯ ಬರಹಗಾರರಾಗಿದ್ದರು. ಅವರು ಸಮಾಜ ಸುಧಾರಣೆಯ ಕಾರ್ಯದಲ್ಲಿ ವಿದ್ಯಾಸಾಗರರ ಬಲಗೈಯಾಗಿದ್ದರು.

"ತತ್ವಬೋಧಿನಿ ಸಭಾ" ಬ್ರಹ್ಮೋ ಸಮಾಜದ ತತ್ವಗಳಿಗೆ ಬದ್ಧವಾದ ಸಂಸ್ಥೆಯಾಗಿದ್ದಿತು. ವಿದ್ಯಾಸಾಗರರು ಆ ಸಂಸ್ಥೆಗೆ ಬಹಳ ಹತ್ತಿರದವರಾಗಿದ್ದರಲ್ಲದೆ ಕೆಲವು ಕಾಲ ಅದರ ಕಾರ್ಯದರ್ಶಿಯೂ ಆಗಿದ್ದರು. "ತತ್ವಬೋಧಿನಿ" ಪತ್ರಿಕೆಯ ಪುಟಗಳಲ್ಲಿಯೇ ವಿಧವಾ ಪುನರ್ವಿವಾಹದ ಬಗ್ಗೆ ಅವರ ದೀರ್ಘ ಪ್ರಬಂಧ ಪ್ರಕಟವಾಗಿದ್ದು ವಿದ್ಯಾಸಾಗರರ ಜೀವನ ಚರಿತ್ರಕಾರರೊಬ್ಬರ ಅಭಿಪ್ರಾಯದಲ್ಲಿ, ಅವರು ಆ ಸಂಘದ ಸಾಂಘಿಕ ವ್ಯವಸ್ಥೆಯಲ್ಲಿ ಇರದಿದ್ದರೂ ತತ್ವಶಃ ಅವರು ಬ್ರಹ್ಮೋ ಸಮಾಜ ಚಳುವಳಿಯ ಸದಸ್ಯರೇ ಆಗಿದ್ದರು. ಅಂದಿನ ಪೂರ್ವಾಗ್ರಹಪೀಡಿತ ವಿಚಾರಗಳ ಸಾಮಾಜಿಕ ಹಿನ್ನೆಲೆಯಲ್ಲಿ ಈ ರೀತಿಯ ಅಭಿಪ್ರಾಯ ವಿದ್ಯಾಸಾಗರರ ಉದಾತ್ತವಾದ ಮಾನವೀಯ ಅನುಕಂಪ ಹಾಗೂ ಪ್ರಗತಿಪರ ವಿಚಾರಗಳ ಒಂದು ಉನ್ನತ ಮಟ್ಟದ ನಿಲುಮೆಯೆಂದು ಧಾರಾಳವಾಗಿ ಹೇಳಬಹುದು. ವಿದ್ಯಾಸಾಗರರ ಉದಾತ್ತ ವಿಚಾರಗಳಿಗೆ "ತತ್ವಬೋಧಿನಿ"ಯ ವಿಚಾರಗಳ ಪ್ರವಾಹದ ಧುಮುಕಿನ ಶಕ್ತಿ ಒದಗಿದಂತಾಯಿತು.

ಸುಶಿಕ್ಷಿತ ಸಮಾಜದ ಪ್ರಗತಿಪರ ವಿಚಾರ ಜನತೆಯ ದೃಷ್ಟಿಯಲ್ಲಿ ವಿಧವಾ ಪುನರ್ವಿವಾಹದ ವಿಚಾರ ಬಹು ಪ್ರಾಮುಖ್ಯವಾಗಿದ್ದಿತು. ವಿದ್ಯಾಸಾಗರರು ಈ ಬಗ್ಗೆ ಆಂದೋಲನ ಆರಂಭಿಸುವುದಕ್ಕಿಂತ ಮುಂಚೆಯೇ, ಬಾಲವಿಧವೆಯರ ಪುನರ್ವಿವಾಹಗಳ ಹಲವಾರು ಪ್ರಯತ್ನಗಳು ಅಲ್ಲಲ್ಲಿ ನಡೆದಿದ್ದವು. ಆದರೆ ಸಮಾಜದ ಪ್ರಬಲ ವಿರೋಧದಿಂದಾಗಿ ಅವು ಯಾವುವೂ ಯಶಸ್ವಿಯಾಗಿರಲಿಲ್ಲ.

ವಿದ್ಯಾಸಾಗರರು ಎರಡು ಭಿನ್ನ ದಾರಿಗಳು ಕವಲೊಡೆಯುವ ಇಕ್ಕಟ್ಟಿನ ಸ್ಥಾನದಲ್ಲಿ ನಿಂತಂತಿತ್ತು. ತೀವ್ರ ಪ್ರಗತಿಪರವಾದ ದಾರಿ ಒಂದೆಡೆಯಾದರೆ ಕಟ್ಟುನಿಟ್ಟಾದ ಸಾಂಪ್ರದಾಯಿಕಪರರ ದಾರಿ ಇನ್ನೊಂದೆಡೆ. ಇದರಲ್ಲಿ ಯಾವುದನ್ನು ಆರಿಸಿಕೊಂಡರೂ ಕಷ್ಟ. ಒಂದೆಡೆ ಕಷ್ಟದಾಯಕ ಪ್ರಗತಿಯ ಪಥ, ಇನ್ನೊಂದೆಡೆ ಸುರಕ್ಷಿತವಾದ ಪ್ರಗತಿ ವಿರೋಧಿ ಸಂಪ್ರದಾಯಗಳ ಪಥ. ಕೊನೆಗೂ ವಿದ್ಯಾಸಾಗರರು ಪ್ರಗತಿಯ ಮಾರ್ಗವನ್ನೇ ಆರಿಸಿಕೊಂಡರು. ವಿಧವಾ ವಿವಾಹಕ್ಕೆ ಶಾಸ್ತ್ರದ ಬೆಂಬಲವಿದೆಯೆಂದು ಸಿದ್ಧಪಡಿಸಲು ಅವರು ಮುಂದಾದರು.

ವಿದ್ಯಾಸಾಗರರ ವಿಧವಾ ಪುನರ್ವಿವಾಹದ ಆಂದೋಲನದ ಬಗೆಗೆ ಹಲವಾರು ಊಹಾಪೋಹಗಳಿವೆ. ಒಂದು ಗುಂಪಿನ ವದಂತಿಯ ಪ್ರಕಾರ ಅತ್ಯಂತ ಪ್ರಗತಿಶೀಲ ವಿಚಾರಗಳುಳ್ಳ ಅವರ ತಾಯಿಯೇ ಅವರಿಗೆ ಸೂಚಿಸಿದಳೆಂತಲೂ ಅವರ ತಂದೆ ಕೂಡ, ಸಂಪ್ರದಾಯಸ್ಥರಾಗಿದ್ದರೂ, ವಿಧವಾ ಪುನರ್ವಿವಾಹದ ವಿಚಾರ ಒಪ್ಪಿಕೊಂಡಿದ್ದರೆಂದು ಹೇಳಲಾಗುತ್ತಿತ್ತು. ಇನ್ನೊಂದು ವದಂತಿಯ ಪ್ರಕಾರ, ತಮ್ಮ ಹಳ್ಳಿಯ ಮನೆಯಲ್ಲಿದ್ದಾಗ ತನ್ನೊಡನೆ ಆಟವಾಡಿದ ಬಾಲವಿಧವೆಯೊಬ್ಬಳ ಕಷ್ಟಕಾರ್ಪಣ್ಯಗಳು ವಿದ್ಯಾಸಾಗರರ ಮನಸ್ಸನ್ನು ಬಹಳಷ್ಟು ಕದಡಿದವು ಎಂದು ಹೇಳಲಾಗುತ್ತಿತ್ತು. ಅವರು 13-14 ವರ್ಷದವರಿದ್ದಾಗ ಅವರೊಂದಿಗೆ ಆಟವಾಡುತ್ತಿದ್ದ ಈ ಸಣ್ಣ ಹುಡುಗಿ ಅಕೆ ವಿಧವೆಯಾದ್ದರಿಂದ ಸಂಪ್ರದಾಯಕ್ಕೆ ಕಟ್ಟುಬಿದ್ದು, ಮೇಲಿಂದ ಮೇಲೆ ಉಪವಾಸ ಮಾಡುವ ಪ್ರಸಂಗಗಳ ಬಗ್ಗೆ ಕೇಳಿ ಕಣ್ಣೀರು ಸುರಿಸುತ್ತಿದ್ದರು.

ವಿದ್ಯಾಸಾಗರರನ್ನು ಕಾರ್ಯೋನ್ಮುಖಗೊಳಿಸಲು ಯಾವ ವ್ಯಕ್ತಿಯ ಉದಾಹರಣೆಯೂ ಅವಶ್ಯವಿರಲಿಲ್ಲ. ಅಂದಿನ ಸಮಾಜದಲ್ಲಿ ಸುತ್ತಲೂ ಸಾಕಷ್ಟು ವಿಧವೆಯರಿದ್ದರು. ಅವರು ಪಡುವ ಬವಣೆಗಳು ಎಲ್ಲೆಡೆಯೂ ಕಾಣುತ್ತಲೇ ಇದ್ದವು. ಇದರ ಬಗ್ಗೆ ಏನಾದರೂ ಮಾಡಲೇಬೇಕೆಂಬ ಹಂಬಲ ಅವರನ್ನು ಸದಾ ಕಾಡುತ್ತಲೇ ಇದ್ದಿತು.

ಸತಿ ಪದ್ಧತಿ ಹಾಗೂ ಸಹಗಮನದ ಉಚ್ಚಾಟನೆಯಾದ ನಂತರ ಸಮಾಜದಲ್ಲಿ ವಿಧವೆಯರ ಸಂಖ್ಯೆ ಭೀಕರವಾಗಿ ಹೆಚ್ಚಿತ್ತು. ಇದಕ್ಕೆ ಮುಖ್ಯ ಕಾರಣ, ಆಗಿನ ಕಾಲದ ಬಂಗಾಲದಲ್ಲಿ ಪ್ರಚಲಿತವಾಗಿದ್ದ ವಿಚಿತ್ರವಾದ "ಕುಲೀನ" ಪದ್ಧತಿಯಾಗಿತ್ತು.ಒಂದು "ಕುಲೀನ" ಪದ್ಧತಿ ತೀಕ್ಷ್ಣತರಹದ ಜಾತೀಯತೆಯೆಂದು ಹೇಳಬಹುದು. ಈ ಪದ್ಧತಿಯನ್ನು 12ನೇ ಶತಮಾನದಲ್ಲಿ ಬಂಗಾಲದಲ್ಲಿ ವಲ್ಲಸೇನ ಎಂಬ ದೊರೆಯು ಬ್ರಾಹ್ಮಣರ ಅತಿ ಉನ್ನತ ಮಟ್ಟದ ಪದ್ಧತಿಯೆಂದು ಪ್ರಚಾರಕ್ಕೆ ತಂದನು. ಅವನ ಪ್ರಕಾರ ಶ್ರೇಷ್ಠ ಬ್ರಾಹ್ಮಣ ಒಂಭತ್ತು ಸದ್ಗುಣಗಳನ್ನು ಪಡೆದಿರಬೇಕು. ಆ ಒಂಭತ್ತು ಸದ್ಗುಣಗಳಲ್ಲಿ ಯಾರು ಎಷ್ಟೆಷ್ಟು ಸದ್ಗುಣಗಳನ್ನು ಪಡೆದಿರುವರೋ ಅದರ ಆಧಾರದ ಮೇಲೆ ಅವರ ಬ್ರಾಹ್ಮಣತ್ವದ ಮಟ್ಟವನ್ನು ನಿರ್ಧರಿಸಬೇಕು. ಈ ಆಧಾರದ ಮೇಲೆ ಬ್ರಾಹ್ಮಣರನ್ನು ಬೇರೆ ಬೇರೆ ವರ್ಗದ ಬ್ರಾಹ್ಮಣರೆಂದು ವಿಂಗಡಿಸಲಾಯಿತು. ಅವರಲ್ಲಿ ಒಂಭತ್ತು ಸದ್ಗುಣಗಳನ್ನೂ ಹೊಂದಿದ ಬ್ರಾಹ್ಮಣನನ್ನು ಕುಲೀನ ಬ್ರಾಹ್ಮಣನೆಂದು ಕರೆಯಲಾಯಿತು. ಕುಲೀನರಲ್ಲಿ ತಮ್ಮ ತಮ್ಮಲ್ಲಿ ಮದುವೆಯಾಗುವುದಕ್ಕೆ ಅಭ್ಯಂತರವಿರಲಿಲ್ಲ. ಮೊದಮೊದಲು ಕುಲೀನ ಹಾಗೂ ಉಳಿದ ಬ್ರಾಹ್ಮಣರಲ್ಲಿಯೂ ಮದುವೆಯಾಗಲು ಅಭ್ಯಂತರವಿರಲಿಲ್ಲ. ಆದರೆ 15ನೇ ಶತಮಾನದಲ್ಲಿ ಕುಲೀನ ಬ್ರಾಹ್ಮಣ ಕುಲಕ್ಕೆ ಸೇರಿದ ಬ್ರಾಹ್ಮಣನು, ಬ್ರಾಹ್ಮಣ ಸಂತತಿಯ ಪಾವಿತ್ರ್ಯತೆಯನ್ನು ಕಾಯುವ ಉದ್ದೇಶದಿಂದ, ಕುಲೀನ ಬ್ರಾಹ್ಮಣರಲ್ಲಿ 36 ವಿಭಾಗಗಳನ್ನು ಕಲ್ಪಿಸಿ, ಪ್ರತಿಯೊಂದು ವಿಭಾಗದವರೂ ತಮ್ಮ ತಮ್ಮಲ್ಲಿ ಮಾತ್ರ ವಿವಾಹ ಸಂಬಂಧವಾಗುವಂತೆ ನಿರ್ಬಂಧಗಳನ್ನು ಕಲ್ಪಿಸಿದನು. ಮೊದಮೊದಲು ವ್ಯಕ್ತಿಯ ಗುಣಗಳ ಮೇಲೆ

ಕೊಡಲ್ಪಟ್ಟ ಕುಲೀನ ಪಟ್ಟ ಕಾಲಾಂತರದಲ್ಲಿ ವಂಶಪರಂಪರವಾಗಿ ಮಾರ್ಪಟ್ಟಿತು. ಯಾವ ಸದ್ಗುಣಗಳನ್ನು ಪಡೆದಿರಲಿ, ಪಡೆಯದೇ ಇರಲಿ ಕುಲೀನನ ಮಕ್ಕಳು ಕುಲೀನರೆಂದೇ ಪರಗಣಿಸಲ್ಪಡಹತ್ತಿದರು. ಇದು ಬರುಬರುತ್ತ ಹೆಣ್ಣು ಮಕ್ಕಳ ಶೋಷಣೆಗೆ ಅನುವು ಮಾಡಿಕೊಟ್ಟಿತು. ಉನ್ನತ ಕುಲದ ಗೃಹಸ್ಥರೆಲ್ಲ ತಮ್ಮ ಹೆಣ್ಣು ಮಕ್ಕಳನ್ನು ಕುಲೀನ ಮನೆತನಸ್ಥರ ಮನೆಗೆ ಕೊಡಬೇಕಾಗಿ ಬಂದಿದ್ದರಿಂದ ಕುಲೀನ ಮನೆತನದ ವರಗಳಿಗೆ ಬಹಳ ಬೇಡಿಕೆ ನಿರ್ಮಾಣವಾಯಿತು. ಇದು ಕುಲೀನ ವರಗಳಿಗೆ ವರದಕ್ಷಿಣೆ ತೆಗೆದುಕೊಳ್ಳುವುದಕ್ಕೂ, ಬಹುಪತ್ನಿತ್ವಕ್ಕೂ ಅವಕಾಶ ಮಾಡಿಕೊಟ್ಟಿತು. ಇವರಿಗೆ ವಿವಾಹ ಒಂದು ಲಾಭದಾಯಕ ವ್ಯಾಪಾರವಾಗಿ ಪರಿಣಮಿಸಿತು. ಹೆಣ್ಣು ಮಕ್ಕಳು ಮೈನೆರೆಯುವ ಮುನ್ನವೇ ಮದುವೆ ಮಾಡುವುದು ಅಂದಿನ ಸಮಾಜದ ಪದ್ಧತಿಯಾಗಿತ್ತು. ಯೋಗ್ಯ ಕುಲೀನ ವರ ಸಿಗದೇ ಇದ್ದಾಗ, ಸಮಾಜದ ನಿಂದೆಗೆ ಹೆದರಿ ಅನೇಕ ಕನ್ಯಾಪಿತೃಗಳು ಒಬ್ಬನಿಗೇ ಅವರ ಮಕ್ಕಳನ್ನು ವಿವಾಹಕ್ಕೆ ನೀಡುತ್ತಿದ್ದರು. ಹೀಗೆ ಬಹುಪತ್ನಿತ್ವ ಸಾಮಾನ್ಯ ವಿಷಯವಾಯಿತು. 15-16 ವರ್ಷದ ಎಳೆಯ ಬಾಲಿಕೆಯನ್ನು 70-80 ವರ್ಷದ ಕುಲೀನ ಮುದುಕನಿಗೆ ಮದುವೆಯ ಪೇಟೆಯಲ್ಲಿ ಬಲಿಪಶುವಾಗಿ ಕೊಡಲಾಗುತ್ತಿತ್ತು. ಮದುವೆ ಆದ ಕೆಲವೇ ದಿನಗಳಲ್ಲಿ ಈ ಮುದುಕರು ಸಾಯುತ್ತಿದ್ದರು. ಅನಂತರ ಆ ಹೆಣ್ಣು ಮಕ್ಕಳು ವೈಧವ್ಯದ ಬವಣೆಯನ್ನು ಅನಭವಿಸುತ್ತ ತಮ್ಮ ಜೀವಮಾನವನ್ನು ಕಳೆಯಬೇಕಾಗುತ್ತಿತ್ತು. ಅನೇಕ ಪತ್ನಿಯರನ್ನುಪಡೆದ ಬ್ರಾಹ್ಮಣರಿಗೆ ತಮ್ಮ ಪತ್ನಿಯರನ್ನು ಸಾಕುವ ಆರ್ಥಿಕ ಜವಾಬ್ದಾರಿ ಕೂಡ ಎಳ್ಳಷ್ಟೂ ಇರಲಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ, ಸಾಮಾಜಿಕ ನಿಂದೆಯಿಂದ ಪಾರುಮಾಡಿದ ಉಪಕಾರಕ್ಕಾಗಿ ಅವರು ಪತ್ನಿಯ ತಂದೆ–ತಾಯಿಗಳಿಂದ ಹಣ ಕಿತ್ತುಕೊಳ್ಳುತ್ತಿದ್ದರು. ಇಂಥ ಹೆಣ್ಣು ಮಕ್ಕಳ ಶೋಷಣೆ ಹಾಗೂ ಕ್ರೌರ ದಬ್ಬಾಳಿಕೆಯ ಉದಾಹರಣೆಗಳು ಅಂದಿನ ಸಮಾಜದಲ್ಲಿ ಬೇಕಾದಷ್ಟು ದೊರೆಯುತ್ತಿದ್ದವು. ಕುಲೀನ ಬ್ರಾಹ್ಮಣರು ಎಷ್ಟೋ ಜನ ಹೆಣ್ಣು ಮಕ್ಕಳನ್ನು ಮದುವೆಯಾಗುತ್ತಿದ್ದರು. ಅವರಿಗೆ ತಮ್ಮ ಎಲ್ಲ ಹೆಂಡಿರ ಹೆಸರುಗಳು ಕೂಡ ನೆನಪಿನಲ್ಲಿರುತ್ತಿರಲಿಲ್ಲ. ಎಷ್ಟೋ ವರ್ಷಗಳವರೆಗೆ ಅವರ ಕಡೆಗೆ ಹೋಗಲು ಕೂಡ ಅವರಿಗೆ ವೇಳೆ ಇರುತ್ತಿರಲಿಲ್ಲ. ಒಮ್ಮೆ ವಿದ್ಯಾಸಾಗರರ ಶಿಕ್ಷಕರಲ್ಲೊಬ್ಬರಾದ ಶಂಭುಚಂದ್ರ ವಾಚಸ್ಪತಿ ಎಂಬುವರು ತಮ್ಮ ಅತಿ ಮುಪ್ಪಿನ ವಯಸ್ಸಿನಲ್ಲಿ ಸಣ್ಣ ಹುಡುಗಿಯೊಬ್ಬಳನ್ನು ಮದುವೆಯಾದರು. ವಿದ್ಯಾಸಾಗರರ ಮನಸ್ಸಿಗೆ ಇದು ಎಷ್ಟೊಂದು ನೋವನ್ನುಂಟುಮಾಡಿತೆಂದರೆ ಅವರು ಆ ಶಿಕ್ಷಕರ ಮನೆಯಲ್ಲಿ ಊಟ ಮಾಡುವುದಿರಲಿ ನೀರನ್ನು ಕೂಡ ಕುಡಿಯುವುದಿಲ್ಲವೆಂದು ಪಣ ತೊಟ್ಟರು. ಆ ಶಿಕ್ಷಕರು ಮುಂದೆ ಕೆಲವೇ ದಿನಗಳಲ್ಲಿ ಸತ್ತು ಬಂಗಾಲದ ತುಂಬೆಲ್ಲ ಹರಡಿದ ವಿಧವೆಯರ ಗುಂಪಿಗೆ, ಮತ್ತೋರ್ವ ಮುಗ್ಧ ಎಳೆಯ ಹುಡುಗಿಯನ್ನು ಸೇರಿಸಿ ಹೋದರು.

ಹೀಗೆ ಜುಲುಮೆಯಿಂದ ಹೇರಲ್ಪಟ್ಟ ವೈಧವ್ಯದ ಸಮಸ್ಯೆ ಬೃಹದಾಕಾರವಾಗಿ ಬೆಳೆದು, ವಿದ್ಯಾಸಾಗರರ ಕಣ್ಣಮುಂದೆ ಭೂತಾಕಾರವಾಗಿ ನಿಂತಂತೆ ಅವರಿಗೆ ಭಾಸವಾಗತೊಡಗಿತು. ಅದು ಚಿಕ್ಕ ವಯಸ್ಸಿನ ಅನೇಕ ಹುಡುಗಿಯರನ್ನು ಜೀವನ ಪರ್ಯಂತ ಕಷ್ಟಕ್ಕೀಡುಮಾಡುವ ಒಂದು ಬಹು ದೊಡ್ಡ ಮಾನವೀಯ ಸಮಸ್ಯೆಯಾಗಿದ್ದಿತು. ಇಂಥ ವಿಧವೆಯರ ಪುನರ್ವಿವಾಹವನ್ನು ಪುರಸ್ಕರಿಸುವ ಧಾರ್ಮಿಕ ಆಧಾರಗಳನ್ನು ಹುಡುಕುವುದಕ್ಕಾಗಿ ವಿದ್ಯಾಸಾಗರರು ಹಳೆಯ ಧರ್ಮಗ್ರಂಥಗಳನ್ನೆಲ್ಲ ಆಳವಾಗಿ, ತೀಕ್ಷ್ಣವಾಗಿ ಅಭ್ಯಸಿಸತೊಡಗಿದರು. ಹಿಂದೂ ಶಾಸ್ತ್ರಗಳ ಆಧಾರದ ವಿರುದ್ಧ ಜನರ ಮನವೊಲಿಸುವುದು ವ್ಯರ್ಥಪ್ರಯತ್ನವೆಂಬುದನ್ನು ವ್ಯವಹಾರಜ್ಞಾನವುಳ್ಳ ವಿದ್ಯಾಸಾಗರರು ಚೆನ್ನಾಗಿ ಅರಿತಿದ್ದರು. ಅಂದಿನ ಸಮಾಜ ಅಂಥವನ್ನು ಒಪ್ಪುವುದಿಲ್ಲವೆಂಬುದನ್ನು ಅವರು ಅರಿತುಕೊಂಡಿದ್ದರು. ಹಿಂದೂ ಶಾಸ್ತ್ರಗಳ ಆಧಾರಗಳಿಂದಲೆ ಇದಕ್ಕೆ ಪರಿಹಾರ ಕಂಡುಕೊಂಡು, ಅದನ್ನು ಸಮಾಜದ ಮುಂದೆ ಇಡಬೇಕೆಂಬುದೇ ಅವರ ಇಚ್ಛೆಯಾಗಿತ್ತು. ಅನೇಕ ವರ್ಷಗಳ ದೀರ್ಘ ಪರಿಶ್ರಮದ ಅಭ್ಯಾಸದ ನಂತರ ಅವರು ಪರಾಶರ ಸಂಹಿತೆಯಲ್ಲಿ, ಕೆಲವು ಸಂದರ್ಭಗಳಲ್ಲಿ ವಿಧವೆಯರ ಪನರ್ವಿವಾಹಕ್ಕೆ ಅವಕಾಶವಿದೆಯೆಂಬುದನ್ನು ಕಂಡು ಹಿಡಿದು, ತಮ್ಮ ವಾದವನ್ನು ಅದರ ಮೇಲೆ ಆಧರಿಸಿ ಜನತೆಯ ಮುಂದಿಡತೊಡಗಿದರು. ಸಹಗಮನ ಮತ್ತು ವಿಧವೆಯಾಗಿ ಬಾಳುವದು ಶ್ರೇಷ್ಠ ನಡವಳಿಕೆಗಳು ಎಂಬುದು ಪರಾಶರನ ಅಭಿಮತವಾಗಿದ್ದರೂ, ಗಂಡ ಕಣ್ಮರೆಯಾಗಿ ಅವನ ಸುದ್ದಿಯೇ ತಿಳಿಯದಾಗ, ಗಂಡ ಮರಣ ಹೊಂದಿದಾಗ, ಇಲ್ಲವೇ ಸನ್ಯಾಸ ಸ್ವೀಕರಿಸಿದಾಗ, ಅವನು ಷಂಢನೆಂದು ಸಿದ್ಧವಾದಾಗ ಅಥವಾ ಅವನು ಜಾತಿಭ್ರಷ್ಟನಾದಾಗ ಪುನರ್ವಿವಾಹಕ್ಕೆ ಅಡ್ಡಿಯಿಲ್ಲವೆಂದು ಅವನ ಅಭಿಪ್ರಾಯವಾಗಿದ್ದಿತು. ಸಹಗಮನ ಪದ್ಧತಿ ಕಾಯ್ದೆ ಬಾಹಿರವಾಗಿರುವುದರಿಂದ ಕಲಿಯುಗದಲ್ಲಿ ವಿಧವಾ ಹೆಣ್ಣು ಮಕ್ಕಳು ಜೀವನಪರ್ಯಂತ ಬ್ರಹ್ಮಚರ್ಯೆ ಕಾಪಾಡಿಕೊಳ್ಳುವುದು ಅಸಾಧ್ಯವೆಂದು ಕಂಡುಬಂದಿದ್ದರಿಂದ ಈ ದಿನಗಳಲ್ಲಿ ಲಭ್ಯವಿರುವ ಮೂರನೇ ಮಾರ್ಗವೆಂದರೆ ಪುನರ್ವಿವಾಹವೇ ಎಂದು ವಿದ್ಯಾಸಾಗರರು ವಾದಿಸಿದರು. ವಿಧವಾ ಪುನರ್ವಿವಾಹ ಶಾಸ್ತ್ರದ ಆಧಾರವುಳ್ಳದ್ದೆಂದೂ "ಪರಾಶರ ಸಂಹಿತೆ" ಕಲಿಯುಗದಲ್ಲಿ ಅನುಸರಿಸಲು ಅತ್ಯಂತ ಯೋಗ್ಯವಾದ ಸಂಹಿತೆಯೆಂದೂ ವಿದ್ಯಾಸಾಗರರು ಪ್ರತಿಪಾದಿಸಿದರು.

ಈ ವಿಷಯವಾಗಿ ಅವರು ಬರೆದ ಸುದೀರ್ಘ ಪ್ರಬಂಧ ಮೊದಲು "ತತ್ವ ಬೋಧಿನಿ"ಯಲ್ಲಿ ಪ್ರಕಟವಾಯಿತು. ನಂತರ 1855 ರಲ್ಲಿ ಅದು ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಈ ಪ್ರಬಂಧ ವಿದ್ಯಾಸಾಗರರ ಶಾಸ್ತ್ರಗಳ ಆಳವಾದ ಜ್ಞಾನ, ವಿಧವಾ ಪುನರ್ವಿವಾಹದ ಬಗ್ಗೆ ಅವರಲ್ಲಿದ್ದ ತೀವ್ರ ಆಸಕ್ತಿ, ಎದುರು ವಾದಿಸಲು ಬಾರದಂತೆ ತಮ್ಮ ವಿಚಾರಗಳನ್ನು ಪ್ರತಿಪಾದಿಸುವ ಜಾಣ್ಮೆ ಇವುಗಳನ್ನು ಎತ್ತಿ ತೋರಿಸಿತು.

ವಿದ್ಯಾಸಾಗರರ ಈ ಗ್ರಂಥ ಅಂದಿನ ಸಂಪ್ರದಾಯ ಸಮುದಾಯವನ್ನೇ ಅಲುಗಾಡಿಸಿತು. ಅದು ಆ ಸಮಾಜಕ್ಕೆ ಬಹು ದೊಡ್ಡ ಆಘಾತವನ್ನೇ ಉಂಟುಮಾಡಿತು. ಧರ್ಮಶಾಸ್ತ್ರದ ಹೆಸರಿನಲ್ಲಿ ಅವರು ಇದುವರೆಗೆ ನಡೆಸಿದ ದಬ್ಬಾಳಿಕೆಗೆ ಇದೊಂದು ಆಹ್ವಾನವೇ ಆಗಿತ್ತು. ಅವರು ತಮ್ಮ ವಿರೋಧಪರ ವಿಚಾರಗಳನ್ನು ಎದುರಿಸಲು ಯತ್ನಿಸತೊಡಗಿದರು. ಹಿಂದೂ ಸಮಾಜದ ಮುಖಂಡ ಸೋವಾಬಝಾರದ ರಾಜಾ ರಾಧಾಕಾಂತದೇವ ಅವರು ತಮ್ಮ ಮನೆಯಲ್ಲಿ ಎರಡು ಮುಕ್ತ ಚರ್ಚಾಕೂಟಗಳನ್ನೇರ್ಪಡಿಸಿ ಅದರಲ್ಲಿ ವಿದ್ಯಾಸಾಗರ ಮತ್ತು ಉಳಿದ ಪಂಡಿತರಿಗೆ ವಿಧವಾ ಪುನರ್ವಿವಾಹ ಹಾಗೂ ಅದರ ಬಗ್ಗೆ ಶಾಸ್ತ್ರಾಧಾರಗಳು ಎಂಬ ವಿಷಯದ ಬಗ್ಗೆ ತಮ್ಮ ತಮ್ಮ ವಾದ ಮಂಡಿಸಲು ಅವಕಾಶ ಕಲ್ಪಿಸಿದರು. ಈ ಚರ್ಚೆಯಲ್ಲಿ ವಿದ್ಯಾಸಾಗರರು ತಮ್ಮ ಅಮೋಘ ಪಾಂಡಿತ್ಯ ಹಾಗೂ ತಮ್ಮ ವಾದಗಳ ಸತ್ಯಾಂಶಗಳನ್ನು ಬಲವಾಗಿ ಮಂಡಿಸಿದರು. ಈ ವಾದಸರಣಿಯಿಂದ ರಾಜಾ ರಾಧಾಕಾಂತದೇವ ಅವರೂ ಪ್ರಭಾವಿತರಾಗದೇ ಉಳಿಯಲಿಲ್ಲ. ಆದರೂ ಅವರು ಸಂಪ್ರದಾಯಸ್ಥ ಗುಂಪಿನೊಂದಿಗೆ ಇರಲು ಬಯಸಿ ಅವರ ಪರವಾಗಿಯೇ ಮತ ನೀಡಿದರು. ಈ ಕಾರ್ಯದಲ್ಲಿ ವಿದ್ಯಾಸಾಗರರಿಗೆ ನೆರವಾದವರೆಂದರೆ ಬ್ರಹ್ಮೋಸಮಾಜದ ಮುಖಂಡರು, ಹಾಗೂ ಯಂಗ್ ಬೆಂಗಾಲರ ಗುಂಪಿನ ಉತ್ಸಾಹಿ ಯುವಕರು. ಇದಕ್ಕೆ ವ್ಯತಿರಿಕ್ತವಾಗಿ "ಧರ್ಮಸಭೆ" ಯ ಮುಖಂಡತ್ವದಲ್ಲಿ ಸಂಪ್ರದಾಯಸ್ಥರು ಈ ಆಂದೋಲನಕ್ಕೆ ತೀವ್ರ ವಿರೋಧವನ್ನೊಡ್ಡಿದರು.

ಇಷ್ಟು ಕಾಲದ ನಂತರ ಅಂದಿನ ಸಮೂಹದಲ್ಲಿ ವಿದ್ಯಾಸಾಗರರ ಗ್ರಂಥ ಎಂಥ ಅಲ್ಲೋಲ ಕಲ್ಲೋಲ ವಾತಾವರಣವನ್ನುಂಟುಮಾಡಿತು ಎಂಬುದನ್ನು ಕಲ್ಪಿಸಿಕೊಳ್ಳುವದು ಕಷ್ಟಸಾಧ್ಯ. ಅದೊಂದು ಬಿರುಗಾಳಿಯನ್ನೇ ಎಬ್ಬಿಸಿತೆಂದು ಹೇಳಬಹುದು. ವಿದ್ಯಾಸಾಗರರು ಹಿಂದೂ ಸಮಾಜದ ಪಾವಿತ್ರ್ಯವನ್ನೇ ಹಾಳುಮಾಡುತ್ತಿದ್ದಾರೆ ಎಂದು ಸಂಪ್ರದಾಯಸ್ಥರು ಆಪಾದಿಸಿದರು. ವಿಧವೆಯರ ಪುನರ್ವಿವಾಹಕ್ಕೆ ಯಾವ ಶಾಸ್ತ್ರಾಧಾರವಿಲ್ಲವೆಂದು ಪ್ರತಿಪಾದಿಸುವ ಅನೇಕ ಲೇಖನಗಳೂ ಗ್ರಂಥಗಳೂ ಪ್ರಕಟವಾದವು. ದೊಡ್ಡ ದೊಡ್ಡ ವಿದ್ವಾಂಸರಿಂದ ವಿಧವಾಪುನರ್ವಿವಾಹದ ವಿರುದ್ಧ ಅಭಿಪ್ರಾಯಗಳನ್ನು ಹಲವು ಸಲ ಹಣ ಕೊಟ್ಟಾದರೂ ದೊರಕಿಸಿ ಪ್ರಸಾರಗೊಳಿಸಲಾಯಿತು. ವಿದ್ಯಾಸಾಗರರ ಮೇಲೆ ಬೈಗುಳಗಳ ಸುರಿಮಳೆಯೇ ಆರಂಭವಾಯಿತು. ವಿದ್ಯಾಸಾಗರರನ್ನು ಅವಹೇಳನಗೊಳಿಸುವ ಉದ್ದೇಶದಿಂದ ನಿಂದಾಗೋಷ್ಠಿಗಳನ್ನು ಏರ್ಪಡಿಸಲಾಯಿತು.

ವಿದ್ಯಾವಂತರ ಗುಂಪಿಗೆ ಸೇರಿದ ಈ ಸಂಪ್ರದಾಯಸ್ಥರ ಉಪಜೀವನ, ಅಳಿವು–ಉಳಿವು, ಶಾಸ್ತ್ರಗಳ ವ್ಯಾಖ್ಯೆಯ ಮೇಲೆ ಹಾಗೂ ಜಾತಿಬಾಂಧವರ ಸಹಾನುಭೂತಿಯ ಮೇಲೆಯೇ ಅವಲಂಬಿಸಿದ್ದವು. ಅವರಿಗೆ ಶಾಸ್ತ್ರದ ಸರಿಯಾದ ವ್ಯಾಖ್ಯೆಯನ್ನು ಕಂಡುಹಿಡಿಯುವುದರ ಬಗ್ಗೆ ಆಸಕ್ತಿಯಿರಲಿಲ್ಲ. ಸಮಾಜದಲ್ಲಿ

ಬೇರೂರಿದ ಸಂಪ್ರದಾಯ ಪದ್ಧತಿಗಳನ್ನು ಮುಂದುವರಿಸುವುದರಲ್ಲಿಯೇ ಅವರ ಹೆಚ್ಚಿನ ಆಸಕ್ತಿಯಿದ್ದಿತು. ಅಂದಿನ ಸಮಾಜದಲ್ಲಿ ಕುರುಡ, ವಿವೇಕಹೀನ, ಉಸಿರುಕಟ್ಟುವ ಅಜ್ಞಾನದ ಮೂಢ ಸಂಪ್ರದಾಯಗಳು ಧರ್ಮಶಾಸ್ತ್ರಗಳ ಮೇಲೆ ದಬ್ಬಾಳಿಕೆ ಮಾಡುತ್ತಿದ್ದವು. ಶಾಸ್ತ್ರದ ನಿಜವಾದ ಅರ್ಥವನ್ನು ಮರೆಮಾಚಿಬಿಟ್ಟಿದ್ದವು. ಧರ್ಮದ ಮೇಲೆ ಸಾಮಾಜಿಕ ಮೌಢ್ಯಗಳು ದಬ್ಬಾಳಿಕೆ ಮಾಡುತ್ತಿರುವುದನ್ನು ಕಂಡು ವಿದ್ಯಾಸಾಗರರ ಮಾನವೀಯತೆ ತುಂಬಿದ ಹೃದಯ ಮಮ್ಮಲ ಮರುಗಿತು. ಮೇಲಿನ ಜಾತಿಯವರು ಧರ್ಮದ ಹೆಸರಿನಲ್ಲಿ ಶೋಷಣೆಗೊಳಗಾಗಿದ್ದ ಸ್ತ್ರೀಯರನ್ನು ಪೀಡಿಸುತ್ತಿದ್ದ ಸಾಮಾಜಿಕ ಹಿಂಸೆಗಳ ವಿರುದ್ಧ ಅವರು ಯುದ್ಧವನ್ನೇ ಸಾರಿದರು.

ವಿಧವಾ ಪುನರ್ವಿವಾಹವನ್ನು ಸಮರ್ಥಿಸಿ ಬರೆದ ಗ್ರಂಥ ಕೇವಲ ಏಳು ದಿನಗಳಲ್ಲಿ 2,000 ಪ್ರತಿಗಳು ಮಾರಾಟವಾಗಿಹೋದ್ದರಿಂದ, ಅದರ 3,000 ಪ್ರತಿಗಳನ್ನು ಮತ್ತೇ ಮುದ್ರಿಸಬೇಕಾಗಿ ಬಂದಿತು. ಅಮೇಲೆ ಮತ್ತೆ ಅದರ 10,000 ಪ್ರತಿಗಳನ್ನು ಮುದ್ರಿಸುವಷ್ಟು ಬೇಡಿಕೆ ಆ ಪುಸ್ತಕಕ್ಕೆ ಒದಗಿತು. ಆ ಗ್ರಂಥದ ಪ್ರಭಾವ ಕೇವಲ ವಿದ್ಯಾವಂತರಿಗೆ ಸೀಮಿತವಾಗಿ ಉಳಿಯಲಿಲ್ಲ. ಅದು ಹರಡಿ ಹಳ್ಳಿಗಾಡಿನಲ್ಲಿಯೂ ನಾಡಿನ ಮೂಲೆಗಳಲ್ಲಿಯೂ ಪ್ರಸಾರವಾಯಿತು. ಕೈಕೊಂಡ ವಿಧವಾ ಪುನರ್ವಿವಾಹವನ್ನು ಪುರಸ್ಕರಿಸಿ ಹಳ್ಳಿಗಾಡಿನ ಜನ ಹಾಡುಗಳನ್ನು ಕಟ್ಟಿ ಹಾಡಹತ್ತಿದರು. ಹೆಣ್ಣು ಮಕ್ಕಳ ಸೀರೆಯ ಅಂಚುಗಳಲ್ಲಿ ವಿಧವಾ ಪುನರ್ವಿವಾಹವನ್ನು ಬೆಂಬಲಿಸುವ ಹಾಡುಗಳ ಸಾಲುಗಳು ಅಚ್ಚಾದವು.

ಪ್ರತಿಕೂಲವಾದ ಬೊಬ್ಬಾಟ ಹಾಗೂ ವಿರೋಧಕರಿಂದ ವಿಚಲಿತರಾಗದೆ, ವಿದ್ಯಾಸಾಗರರು ಈ ವಿಷಯದ ಬಗ್ಗೆ ತಮ್ಮ ಎರಡನೇ ಪ್ರಬಂಧವನ್ನು ಪ್ರಕಟಿಸಿದರು. ಈ ಪ್ರಬಂಧ ಅವರ ಅಮೋಘವಾದ ವಿದ್ವತ್ತೆಯನ್ನು ಹೊರಹಮ್ಮಿಸಿತು. ಶಕ್ತಿಯುತವಾದ ಆದರೂ ಸೊಗಸಾದ ಶೈಲಿಯಲ್ಲಿ ಬರೆದ ಈ ಗ್ರಂಥ ಪಾಂಡಿತ್ಯಬಲದಿಂದ ವಿರೋಧಿಗಳು ನಿರ್ಮಿಸಿದ ಭದ್ರಕೋಟೆಯನ್ನು ಭೇದಿಸಿ ವಿಧವಾ ಪುನರ್ವಿವಾಹವನ್ನು ಬಲವಾಗಿ ಬೆಂಬಲಿಸುವ ಪ್ರಭಾವಿ ಗ್ರಂಥವಾಗಿದ್ದಿತು. ವಿದ್ಯಾಸಾಗರರು ಬೈಗುಳಗಳಿಂದ ಉತ್ತರಿಸಲಿಲ್ಲ. ಬೈಗುಳಗಳಿಗೆ ವಿರೋಧವಾಗಿ ಅವರು ನಿರ್ವಿವಾದವಾದ ವಾದಸರಣಿ ಹಾಗೂ ತರ್ಕದ ಆಧಾರಗಳಿಂದ ಉತ್ತರಿಸಿದರು. ವಿದ್ಯಾಸಾಗರರ ಮುಂಚೆ ರಾಜಾರಾಮ ಮೋಹನರಾಯರು ಮಾತ್ರ ತಮ್ಮ ಅಮೋಘ ಬರವಣಿಗೆಗಳಿಂದ ಹಿಂದೂ ಧರ್ಮಗ್ರಂಥಗಳ ಬಗೆಗೆ ಇಷ್ಟೊಂದು ಅಧಿಕಾರಯುತವಾದ ಪಾಂಡಿತ್ಯವನ್ನು ಹೊಂದಿದವರಾಗಿದ್ದರು.

ವಿಧವೆಯರ ಪುನರ್ವಿವಾಹದ ಬಗ್ಗೆ ಬರೆದ ತಮ್ಮ ಎರಡನೇ ಪ್ರಬಂಧದಲ್ಲಿ ವಿದ್ಯಾಸಾಗರರು ದೇಶಾಚಾರವೆಂದು ಹೇಳಲಾದ ಅಂದಿನ ಸಮಾಜದ ಪದ್ಧತಿಗಳನ್ನು ಅತ್ಯಂತ ಕಟುವಾಗಿ ಟೀಕಿಸಿದ್ದಾರೆ. "ದೇಶಾಚಾರ ಶಾಸ್ತ್ರಗಳ ಮೇಲೆ ಕುಳಿತು ಧರ್ಮವನ್ನು ಛಿದ್ರಿಸಿ, ಒಳ್ಳೆಯದು-ಕೆಟ್ಟದ್ದು ಎಂಬ ವಿಚಾರಶೀಲತೆಯನ್ನು

ಭಂಗಗೊಳಿಸಿ, ನ್ಯಾಯ-ಅನ್ಯಾಯಗಳ ವಿವೇಚನೆಯ ದೃಷ್ಟಿಯನ್ನು ಸಂಪೂರ್ಣವಾಗಿ ನಾಶಗೊಳಿಸಿದೆ" ಎಂದು ಬರೆದರು. ಅದೇ ಗ್ರಂಥದಲ್ಲಿ ಮುಂದುವರಿದು ಅವರು ಹೀಗೆ ಹೇಳಿದರು: "ಅಯ್ಯೋ ನನ್ನ ನಿರ್ಭಾಗ್ಯ ಭಾರತೀಯ ಸಹೋದರರೇ, ಎಲ್ಲಿಯವರೆಗೆ ನೀವು ಗಾಬರಿಯ ಹಾಸಿಗೆಯ ಮೇಲೆ ಆತ್ಮವಂಚನೆಯ ನಿದ್ರೆ ಮಾಡಬೇಕೆನ್ನುವಿರಿ? ನಿಮ್ಮ ಸದ್ಭಾವನೆಯ ಕಣ್ಣುಗಳನ್ನು ತೆರೆಯಿರಿ. ನಿಮ್ಮ ಪವಿತ್ರವಾದ ಭಾರತ, ಹಾದರ ಮತ್ತು ಗರ್ಭಪಾತಗಳಂಥ ಸಹಸ್ರಾರು ಪಾಪ ಕೃತ್ಯಗಳಿಂದ ತುಂಬಿ ಕೊಳಕಾಗಿದೆ ಎಂಬುದನ್ನು ಕಣ್ಣು ತೆರೆದು ನೋಡಿರಿ.... ಬಹು ಕಾಲದಿಂದ ಸಮಾಜ ಪದ್ಧತಿಯ ಹೊರೆಯನ್ನು ಹೊತ್ತು ಬಾಗಿ ನಡೆದ ರೂಢಿ ನಿಮ್ಮ ಬುದ್ಧಿಯನ್ನು ದಂಗುಬಡಿಸಿ, ನಿಮ್ಮ ವಿವೇಚನಾಶಕ್ತಿಯನ್ನು ಹರಣಗೊಳಿಸಿ ನಿಮ್ಮನ್ನು ವಿವೇಕಹೀನರನ್ನಾಗಿ ಮಾಡಿ, ಧರ್ಮದ ಬಗ್ಗೆ ತಿಳುವಳಿಕೆಯನ್ನು ಹದಗೆಡಿಸಿದೆ. ಈ ಕಾರಣಗಳಿಂದಾಗಿ ನಿಮ್ಮ ಹೃದಯ ಕಲ್ಲುಹೃದಯವಾಗಿ ಮಾರ್ಪಟ್ಟು, ನಿರ್ಭಾಗ್ಯ ವಿಧವೆಯರು ನಿತ್ಯ ಅನುಭವಿಸುತ್ತಿರುವ ಕಷ್ಟಗಳ ಬಗ್ಗೆ ನಿಮ್ಮ ಹೃದಯದಲ್ಲಿ ಅನುಕಂಪ ಹುಟ್ಟಲಾರದು. ಅಷ್ಟೇ ಅಲ್ಲ, ದೇಶದ ತುಂಬ ಆವರಿಸಿದ ಹಾದರ ಮತ್ತು ಗರ್ಭಪಾತಗಳಂಥ ಪಾಪಕೃತ್ಯಗಳ ಭೀಕರ ಹೆಚ್ಚುವಿಕೆಯ ಬಗ್ಗೆ ನಿಮಗೆ ಪಶ್ಚಾತ್ತಾಪವೂ ಆಗದಿರಲಾರದು. ನಿಮ್ಮ ಜೀವದಷ್ಟೇ ಪ್ರಿಯವಾಗಿರುವ ನಿಮ್ಮ ಹೆಣ್ಣು ಮಕ್ಕಳನ್ನು ವೈಧವ್ಯದ ಬೆಂಕಿಯಲ್ಲಿ ಬೇಯಲು ಬಿಡಲು ನೀವು ಸಿದ್ಧ. ಮನುಷ್ಯ ದೇಹಕ್ಕೆ ಸ್ವಭಾವಸಹಜವಾದ ಕಾಮಾತುರತೆಯಿಂದ ಆಗುವ ಹಾದರವನ್ನು ಸಹಿಸಲು ನೀವು ಸಿದ್ಧ; ಅದರಿಂದಾಗುವ ನೈತಿಕ ಅಧಃಪತನ ಮತ್ತು ಧರ್ಮ ವಿರೋಧವಾದ ನಡವಳಿಕೆಯನ್ನು ಸಹಿಸಬಲ್ಲಿರಿ, ಸಮಾಜದಲ್ಲಿ ನಿಮಗಾಗುವ ಮುಖ ಭಂಗವನ್ನು ತಪ್ಪಿಸಿಕೊಳ್ಳಲು ನಿಮ್ಮ ಮಕ್ಕಳು ಗರ್ಭಪಾತ ಮಾಡಿಸಿಕೊಳ್ಳುವುದನ್ನು ನೀವು ಸಹಿಸಿಕೊಳ್ಳಬಲ್ಲಿರಿ; ಅದರಿಂದ ನೀವು ಇನ್ನೂ ಹೆಚ್ಚು ಪಾಪಕೂಪದಲ್ಲಿ ಇಳಿಯುವಿರೆಂಬ ಪರಿವೆ ನಿಮಗಿರುವುದಿಲ್ಲ. ಆದರೆ ಆಶ್ಚರ್ಯಕರವಾದ ಸಂಗತಿಯೆಂದರೆ ಅವರಿಗೆ ಮತ್ತೊಮ್ಮೆ ಮದುವೆಯಾಗಲು ಒಪ್ಪಿಗೆಯಿತ್ತು, ಅವರನ್ನು ವೈಧವ್ಯದ ಕಷ್ಟದಿಂದ ಪಾರು ಮಾಡಲು ನೀವು ಸಿದ್ಧರಿಲ್ಲ. ನಿಮ್ಮ ಮಗಳ ಗಂಡನು ಸತ್ತೊಡನೆ, ಅವಳ ದೇಹ ಕಲ್ಲಿನಂತೆ ಜಡವಾಗುವುದೆಂದು ನೀವು ಭಾವಿಸಿದಂತಿದೆ; ಅಂದಿನಿಂದ ಅವಳಿಗೆ ದುಃಖವೆಂಬುದೇ ಇಲ್ಲ, ಅವಳಿಗೆ ನೋವೆಂಬುದೇ ಇಲ್ಲ, ಅವಳ ದೈಹಿಕ ಪ್ರತಿಕ್ರಿಯೆಗಳೆಲ್ಲಾ ಸತ್ತುಹೋಗಿವೆಯೆಂದು ನೀವು ಊಹಿಸಿದಂತಿದೆ. ನಿಮ್ಮ ಇಂಥ ಊಹೆಗಳು ತಪ್ಪು ಎಂಬುದು ನಿಮ್ಮ ಅನುಭವದ ಹೆಜ್ಜೆ ಹೆಜ್ಜೆಗೆ ಗೋಚರಿಸುತ್ತಿದೆ. ಎಂತ ದುಃಖದ ಪರಿಸ್ಥಿತಿಯಿದು! ಯಾವ ದೇಶದ ಗಂಡಸರ ಹೃದಯದಲ್ಲಿ ಅನುಕಂಪವೆಂಬುವುದಿಲ್ಲವೋ, ಯಾರಲ್ಲಿ ನಿಜವಾದ ಧರ್ಮದ ತಿಳಿವಳಿಕೆಯ ಬಗ್ಗೆ ಕಳಕಳಿಯಿಲ್ಲವೋ, ಎಲ್ಲಿ ನ್ಯಾಯವಾವುದು, ಅನ್ಯಾಯವಾವುದು ಎಂಬುದರ ಬಗೆಗೆ, ಒಳ್ಳೆಯದು ಯಾವುದು ಕೆಟ್ಟದು ಯಾವುದು ಎಂಬುದರ

ಬಗ್ಗೆ ವಿವೇಕಯುತವಾದ ಪರಿಜ್ಞಾನವಿಲ್ಲವೋ, ಎಲ್ಲಿ ಸದ್ಗುಣ ಮತ್ತು ನೀಚತನವನ್ನು ಗುರುತಿಸುವ ಶಕ್ತಿಯಿಲ್ಲವೋ, ಎಲ್ಲಿ ಸಂಪ್ರದಾಯಗಳ ಅಂಧಾನುಕರಣೆ ಮಾತ್ರ ಧಾರ್ಮಿಕ ನಡವಳಿಕೆಯೆನಿಸಿಕೊಂಡು ಮೆರೆಯುವುದೋ, ಅಂಥ ದೇಶದಲ್ಲಿ ನಿರ್ಭಾಗ್ಯ ಹಾಗೂ ಗತಿಯಿಲ್ಲದ ಅಸಹಾಯಕಳಾದ ಹೆಣ್ಣು ಜನಿಸದಿರಲಿ."

ಕ್ರಿ.ಶ.1856 ರಲ್ಲಿ ತಮ್ಮ ಈ ಎರಡು ಗ್ರಂಥಗಳನ್ನು ಇಂಗ್ಲಿಷ್ ಬಾಷೆಯಲ್ಲಿ ಬಾಷಾಂತರ ಮಾಡಿ *Marriage of Hindu Widows* ಎಂಬ ಗ್ರಂಥವನ್ನು ಪ್ರಕಟಿಸಿದರು.

ಬೈಗುಳ, ನಿಂದೆ, ಅವಮಾನಗಳು, ವಿದ್ಯಾಸಾಗರರ ಮೇಲೆ ಸುರಿಯುತ್ತಲೇ ಇದ್ದವು. ರಸ್ತೆಯಲ್ಲಿ ಹೋಗುತ್ತಿರುವಾಗ ಒಮ್ಮೆಲೇ ಅವರ ವಿರೋಧಿಗಳ ಗುಂಪು ಅವರನ್ನು ಸುತ್ತುಗಟ್ಟಿ ಒಂದೇ ಸಮನೆ ಬೈಗುಳಗಳ ಸುರಿಮಳೆ ಗೈಯುತ್ತಿದ್ದರು. ಒಮ್ಮೆ ಅವರನ್ನು ದೈಹಿಕವಾಗಿ ಹಿಂಸಿಸಲು ಒಂದು ಪೂರ್ವಯೋಜಿತ ಸನ್ನಾಹ ನಡೆಯಿತು. ಇದರಿಂದ ಭಯಗೊಂಡ ಅವರ ತಂದೆ ವಿದ್ಯಾಸಾಗರರ ರಕ್ಷಣೆಗಾಗಿ ಒಬ್ಬ ನಂಬಿಕಸ್ಥ ಅಂಗರಕ್ಷಕನನ್ನು ಕಲ್ಕತ್ತಾಗೆ ಕಳುಹಿಸಿದರು. ಇದು ವಿದ್ಯಾಸಾಗರರಿಗೆ ಹಿಡಿಸಲಿಲ್ಲ. ಅವರು ಶಬ್ದಗಳ ಬೈಗುಳಗಳಿಗಾಗಲಿ, ಅಥವಾ ದೈಹಿಕ ಹಿಂಸೆಯ ಬೆದರಿಕೆಗಾಗಲಿ, ಹಿಂಜರಿಯುವ ವ್ಯಕ್ತಿಯಾಗಿರಲಿಲ್ಲ. ವಂಶಪರಂಪರಾಗತ ಹಟಮಾರಿತನ ಅವರಲ್ಲಿ ರಕ್ತಗತವಾಗಿ ಬಂದಿತ್ತು. ಹಟಮಾರಿತನ ಯಾರಲ್ಲಿಯೂ ಬಯಸಬಹುದಾದ ಸದ್ಗುಣವೇನೂ ಅಲ್ಲ. ಆದರೆ ಈ ಗುಣ ವಿದ್ಯಾಸಾಗರರಲ್ಲಿ ಎಂಥ ಉದಾತ್ತ ಸದ್ಗುಣವಾಗಿ ಪರಿಣಮಿಸಿತ್ತೋ ಹಾಗೆ ಬೇರೆ ಯಾರಲ್ಲಿಯೂ ಕಂಡುಬರಲಿಲ್ಲ. ಅತ್ಯಂತ ಭೀಕರವಾದ ವಿರೋಧವಿದ್ದಾಗಲೂ ಅವರು ತಮ್ಮ ನಿತ್ಯ ಕಾರ್ಯಗಳನ್ನು ಬಿಟ್ಟುಕೊಡಲಿಲ್ಲ.

ತಾತ್ವಿಕವಾಗಿ ಎಷ್ಟೇ ಕ್ರಾಂತಿಕಾರಕವಾಗಿದ್ದರೂ ವೈಚಾರಿಕವಾಗಿ ಈ ಪುಸ್ತಕಗಳ ಪ್ರಕಟಣೆ ಈ ಕಾರ್ಯಕ್ಕೆ ಸಾಕಾಗುವಂತಿರಲಿಲ್ಲ. ಆದಕಾರಣ ವಿದ್ಯಾಸಾಗರರು ವಿಧವಾ ಪುನರ್ವಿವಾಹವನ್ನು ಕಾನೂನು ಮನ್ನಿಸುವಂತೆ ಮಾಡಲು ಪ್ರಯತ್ನಿಸ ತೊಡಗಿದರು. ಅದನ್ನು ವಿರೋಧಿಗಳ ದುರಾಪೇಕ್ಷೆಗೆ ನಿಲುಕದಂತೆ ಮಾಡಲು ಇದೊಂದೇ ಮಾರ್ಗವೆಂದು ಅವರು ಬಗೆದರು. ವಿಧವಾ ಪುನರ್ವಿವಾಹಕ್ಕೆ ಅಡತಡೆಯನ್ನುಂಟುಮಾಡುವ ಎಲ್ಲ ಕಾನೂನಿನ ತೊಂದರೆಗಳನ್ನು ಇಲ್ಲದಂತೆ ಮಾಡಿ, ಅದಕ್ಕೆ ಕಾನೂನಿನ ಮನ್ನಣೆಯಿರುವಂತೆ ಮಾಡಬೇಕೆಂದು ಸಮಾಜದ ಪ್ರಗತಿಪರ ಗುಂಪಿನ 987 ಪ್ರತಿಷ್ಠಿತ ವ್ಯಕ್ತಿಗಳಿಂದ ಸಹಿ ಮಾಡಿಸಿ, ಇಂಡಿಯನ್ ಲೆಜಿಸ್ಲೇಟಿವ್ ಕೌನ್ಸಿಲ್ಲಿಗೆ ಮನವಿಯನ್ನು ಸಲ್ಲಿಸುವ ವ್ಯವಸ್ಥೆ ಮಾಡಿದರು.

ಇಂಡಿಯನ್ ಲೆಜಿಸ್ಲೇಟಿವ್ ಕೌನ್ಸಿಲಿನಲ್ಲಿ, ಅದರ ಸದಸ್ಯರಾದ ಜೆ.ವಿ.ಗ್ರಾಂಟ್ ಎಂಬುವರು, 1855 ರ ನವೆಂಬರ್ 17 ರಂದು ಈ ವಿಷಯಕ್ಕೆ ಸಂಬಂಧಿಸಿದ ಮಸೂದೆಯನ್ನು ಮಂಡಿಸಿದರು. ಅದನ್ನು ಮಂಡಿಸುವಾಗ ಅವರು ತಮ್ಮ ಭಾಷಣದಲ್ಲಿ ವಿದ್ಯಾಸಾಗರರ ಬಗ್ಗೆ ಪ್ರಸ್ತಾಪಿಸುತ್ತಾ "ಪಂಡಿತರೂ, ಪ್ರಖ್ಯಾತ

ಸಮಾಜ ಸುಧಾರಕರೂ, ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರೂ ಆದ ವಿದ್ಯಾಸಾಗರರು ಈ ಆಂದೋಲನದ ಮುಂದಾಳಾಗಿದ್ದಾರೆ. ಆ ಆಂದೋಲನದ ಪರಿಣಾಮವಾಗಿಯೇ ಈ ಮಸೂದೆ ರೂಪುಗೊಂಡಿದೆ" ಎಂದು ಹೇಳಿದರು. ಅವರು ಮುಂದುವರಿದು, "ಈ ಮಸೂದೆ ದರ್ಮಕ್ಕೆ ಯಾವ ತರಹದ ಅಡೆತಡೆಯನ್ನೂ ಉಂಟುಮಾಡುವುದಿಲ್ಲ. ಯಾಕೆಂದರೆ ಇದು ಕೇವಲ ಮಂಜೂರಾತಿ ನೀಡುವ ಮಸೂದೆ. ಅದರ ಪ್ರಯೋಜನ ಪಡೆಯಲು ಯಾರಾದರೂ ಬಯಸಿದರೆ ಮಾತ್ರ ಅವರು ಅದರ ಉಪಯೋಗ ಮಾಡಿಕೊಳ್ಳಬಹುದು" ಎಂದು ಗ್ರಾಂಟ್ ವಾದಿಸಿದರು. ಇನ್ನೋರ್ವ ಸದಸ್ಯರಾದ ಸರ್ ಜೇಮ್ಸ್ ಕಾಲ್‌ವಿಲ್ ಅವರು ಮಸೂದೆಯನ್ನು ಅನುಮೋದಿಸುತ್ತಾ, ವಿದ್ಯಾಸಾಗರರ ವಿಶಾಲವಾದ ಭಾವನೆ ಹಾಗೂ ಸಮಾಜ ಪ್ರಗತಿಗಾಗಿ ಅವರ ಕಳಕಳಿಯ ಬಗ್ಗೆ ಬಹಳ ಗೌರವಪೂರ್ವಕ ಮೆಚ್ಚಿಕೆ ವ್ಯಕ್ತಪಡಿಸಿದರು. ಬಾಲವಿಧವೆಯೋರ್ವಳು ತನ್ನ ಮನಸ್ಸಿನ ವಿರುದ್ಧ ಅನೇಕ ಸಲ ತಮ್ಮ ನಿಶ್ಚಯದ ಸಂದರ್ಭದಲ್ಲಿ ಮುಖ ನೋಡದ ಸತ್ತ ಗಂಡನಿಗೆ ಗೌರವ ಹಾಗೂ ಕರ್ತವ್ಯದ ಹೆಸರಿನಲ್ಲಿ ಸಾಯುವವರೆಗೆ ಅತ್ಯಂತ ದಾರುಣವಾದ ಕಷ್ಟಗಳನ್ನು ಅನುಭವಿಸುವಂತೆ ಮಾಡುವುದನ್ನು ಅವರು ಕಟುವಾಗಿ ಖಂಡಿಸಿದರು.

ಭಾರತದ ರಾಷ್ಟ್ರೀಯ ಪ್ರಾಚೀನ ಪತ್ರಾಗಾರ (ನ್ಯಾಷನಲ್ ಅರ್ಕೈವ್ಸ್)ದಲ್ಲಿ ಉಪಲಬ್ಧವಿರುವ ವಿಧವಾ ಪುನರ್ವಿವಾಹದ ಬಗೆಗಿನ ಕಾಗದಗಳು, ಅದರ ಬಗ್ಗೆ ನಡೆದ ಪತ್ರ ವ್ಯವಹಾರ ಹಾಗೂ ಸಭೆಗಳ ಕಾರ್ಯಕಲಾಪಗಳು ಈ ಮಸೂದೆ ದೇಶದಾದ್ಯಂತ ಎಂಥ ಪ್ರಚಂಡ ಬಿರುಗಾಳಿಯನ್ನೆಬ್ಬಿಸಿತೆಂಬುದನ್ನು ಖಚಿತಪಡಿಸುತ್ತವೆ. ಸಹಸ್ರಾರು ಜನರ ಸಹಿಗಳೊಂದಿಗೆ ಮಸೂದೆಯ ಪರವಾಗಿ ಬಹಳಷ್ಟು ಮನವಿಗಳು ಬಂದರೆ ಅದಕ್ಕೂ ಹೆಚ್ಚು ವಿಧವಾ ವಿವಾಹವನ್ನು ವಿರೋಧಿಸುವ ಮನವಿಗಳು ಕೌನ್ಸಿಲ್ಲಿಗೆ ತಲುಪಿದವು. ಅವು ಕೇವಲ ಬಂಗಾಲ ಪ್ರಾಂತದಿಂದ ಮಾತ್ರವಾಗಿರಲಿಲ್ಲ. ದಕ್ಷಿಣ ಹಾಗೂ ಪಶ್ಚಿಮ ಭಾರತದ ಅನೇಕ ಭಾಗಗಳಿಂದ ಮನವಿಗಳು ಬಂದವು. ಗ್ರಾಂಟ್‌ನ ಅಂದಾಜಿನ ಪ್ರಕಾರ ಮಸೂದೆಯ ವಿರೋಧವಾಗಿ 50 ರಿಂದ 60 ಸಾವಿರ ಸಹಿ ಹೊಂದಿದ 40 ಮನವಿಗಳು ಬಂದವು ಮತ್ತು ಸುಮಾರು 5,000 ಜನರ ಸಹಿಯಿದ್ದ 25 ಮನವಿಗಳು ಮಸೂದೆಯ ಪರವಾಗಿ ಬಂದವು. ಯಾವಾಗಲೂ ಬಹುಮತದ ಅಭಿಪ್ರಾಯವೇ ಗ್ರಾಹ್ಯ ಎಂದು ಹೇಳುವಂತೆ ಬರುವುದಿಲ್ಲ. ಎಲ್ಲ ಸುಧಾರಣೆಗಳೂ ಬಹುತೇಕವಾಗಿ ಪ್ರಜ್ಞರಾದ ಅಲ್ಪಸಂಖ್ಯಾತರಿಂದಲೇ ಮೊದಲಿಗೆ ಮಂಡಿಸಲ್ಪಟ್ಟಿರುತ್ತವೆ.

ಈ ವಿಷಯದ ಕಾಗದ ಪತ್ರಗಳು ಇನ್ನೊಂದು ಸ್ವಾರಸ್ಯಕರ ಸಂಗತಿಯನ್ನು ಹೊರಗೆಡಹುತ್ತವೆ. ಕಲ್ಕತ್ತಾದ 44 ನಿವಾಸಿಗಳ ಕೌನ್ಸಿಲ್ಲಿಗೆ ಸಲ್ಲಿಸಿದ ಮನವಿಯಲ್ಲಿ ಈ ಮಸೂದೆಯ ಅನ್ವಯ ನಡೆಯುವ ಪ್ರತಿಯೊಂದು ಮದುವೆಯೂ ರಿಜಿಸ್ಟರ್ ಆಗುವುದನ್ನು ಕಡ್ಡಾಯಪಡಿಸಬೇಕೆಂದು ಸೂಚಿಸಿದ್ದರು. ಈ ಕಲಂನ್ನು ಮಸೂದೆಯಲ್ಲಿ

ಸೇರಿಸಲಿಲ್ಲ. ವರದಿಯ ಪ್ರಕಾರ ಇದು ಸಿಲೆಕ್ಟ್ ಕಮಿಟಿಯಿಂದ ಪಾಸಾಗಿ 1856ರ ಜುಲೈ 26ರಂದು ಗವರ್ನರ್ ಜನರಲ್‌ನ ಮನ್ನಣೆ ಪಡೆಯಿತು. ಭಾರತದ ಸಾಮಾಜಿಕ ಕ್ರಾಂತಿಯ ಇತಿಹಾಸದಲ್ಲಿ ಇದೊಂದು ಸುವರ್ಣಾಕ್ಷರಗಳಲ್ಲಿ ಬರೆದಿಡಬಹುದಾದ ದಿನವಾಗಿ ಪರಿಣಮಿಸಿತು.

ಈ ಮಸೂದೆಯಲ್ಲಿ ರಿಜಿಸ್ಟ್ರೇಶನ್ ಕಡ್ಡಾಯವಾಗಿಸುವ ಕಲಮು ಇರದೆ ಇದ್ದದ್ದು, ಅನೇಕ ವಿಧವಾ ಪುನರ್ವಿವಾಹಗಳ ರದ್ದತಿಗೆ ಅನುವು ಮಾಡಿಕೊಟ್ಟಿತು. ಈ ತಪ್ಪಿನ ಬಗೆಗೆ ವಿದ್ಯಾಸಾಗರರಿಗೆ ತಿಳಿದಿರಲಿಲ್ಲವೆಂದಲ್ಲ. ಆಗಿನ ದಿನಮಾನಕ್ಕೆ ಅದು ಬಹಳ ಕ್ರಾಂತಿಕಾರಕ ಕ್ರಮವೆಂದು ಅವರಿಗೆ ಅನ್ನಿಸಿರಬೇಕು. ಮುಂದೆ ಅನೇಕ ಪುನರ್ವಿವಾಹಗಳು ರದ್ದಾದ ಸಂದರ್ಭ ಒದಗಿದಾಗ ಅವರು ಮದುವೆಯಾದ ಗಂಡು ಹೆಣ್ಣು ಒಂದು ಘೋಷಣಾ ಪತ್ರಕ್ಕೆ ಸಹಿ ಮಾಡುವುದನ್ನು ಕಡ್ಡಾಯಗೊಳಿಸಬೇಕೆಂಬ ಅಭಿಪ್ರಾಯಕ್ಕೆ ಬಂದರು.

ಅನಂತರ ಬಂದ ಪ್ರಶ್ನೆ ಈ ವಿಧೇಯಕವನ್ನು ಹೇಗೆ ಕಾರ್ಯಗತ ಗೊಳಿಸಬೇಕೆಂಬುದು. ಸ್ವಾಭಾವಿಕವಾಗಿ ಕೆಲವು ದಿನಗಳವರೆಗೆ ಯಾರೂ ವಿಧವಾ ಪುನರ್ವಿವಾಹಕ್ಕೆ ಮುಂದೆ ಬರುವ ಸಾಹಸ ಮಾಡಲಿಲ್ಲ. ಆದರೆ ಕೆಲವು ದಿನಗಳ ನಂತರ ವಿದ್ಯಾಸಾಗರರ ಸತತ ಪ್ರಯತ್ನಗಳು ಫಲಿಸತೊಡಗಿದವು. ಮೊದಲನೆ ವಿಧವಾ ಪುನರ್ವಿವಾಹವು ಅವರ ಸಮ್ಮುಖದಲ್ಲಿ ಡಿಸೆಂಬರ್ 1856 ರಲ್ಲಿ ಅವರ ಸ್ನೇಹಿತರಾದ ರಾಜಕೃಷ್ಣ ಬಂದೋಪಾಧ್ಯಾಯ ಅವರ ಮನೆಯಲ್ಲಿ ನಡೆಯಿತು. ಈ ಮದುವೆಯ ವರನ ಹೆಸರು ಶ್ರೀ ಚಂದ್ರವಿದ್ಯಾರತ್ನ. ವಧು 12 ವರ್ಷದ ಬಾಲವಿಧವೆಯಾಗಿದ್ದ ಕಾಳಿಮತಿ. ಈ ಮದುವೆ ಪಟ್ಟಣದ ತುಂಬೆಲ್ಲ ಹಾಹಾಕಾರವನ್ನುಂಟು ಮಾಡಿತು. ಈ ಸಂದರ್ಭದಲ್ಲಿ ಗಲಭೆಯಾಗಬಹುದೆಂಬ ಹೆದರಿಕೆಯಿಂದ ವಿದ್ಯಾಸಾಗರರು ಮೊದಲೇ ಪೊಲೀಸ್ ಬಂದೋಬಸ್ತಿನ ವ್ಯವಸ್ಥೆ ಮಾಡಿದ್ದರು. ಮದುವೆಯ ಸ್ಥಳ ಅತ್ಯಂತ ಜನನಿಬಿಡವಾದ ಪ್ರದೇಶದಲ್ಲಿತ್ತು. ಬಹುತೇಕ ಜನ ಇಂಥ ಕಲ್ಪನಾತೀತವಾದ ಅಭೂತಪೂರ್ವ ಚಮತ್ಕಾರದ ಘಟನೆಯನ್ನು ಕೌತುಕದಿಂದ ನೋಡಲು ಬಂದಿದ್ದರು. ಅನೇಕರು ಅದನ್ನು ತುಚ್ಛೀಕರಿಸಿ ಮೋಜು ನೋಡಲು ಬಂದಿದ್ದರು. ಆದರೆ ಪ್ರಗತಿಶೀಲ ಗುಂಪುಗಳ ಪ್ರತಿನಿಧಿಗಳು, ಈ ಸಮಾರಂಭದಲ್ಲಿ ಮನಸಾ ಭಾಗವಹಿಸಿ, ಅದನ್ನು ಯಶಸ್ವಿಗೊಳಿಸಲು ಆಸಕ್ತರಾಗಿ ಬಂದಿದ್ದರು.

ಸಮಾಜ ಸುಧಾರಕರೆಂದು ಆಗಲೇ ಹೆಸರುವಾಸಿಯಾಗಿದ್ದ ರಾಜಾರಾಮ ಮೋಹನ ರಾಯರ ಚಿಕ್ಕ ಮಗ ರಾಮಪ್ರಸಾದ ರಾಯ ಅವರ ಬಗ್ಗೆ ಒಂದು ಕಥೆ ಪ್ರಚಲಿತವಿದೆ. ಅವರು ವಿದ್ಯಾಸಾಗರರ ಸ್ನೇಹಿತರಾಗಿದ್ದರಲ್ಲದೆ, ಮೊದಲಿನಿಂದ ವಿಧವಾ ಪುನಿರ್ವಿವಾಹಕ್ಕೆ ಸಹಾನುಭೂತಿಯುಳ್ಳವರಾಗಿದ್ದರು. ಆದರೆ ತಮ್ಮ ಮಾತಿಗೆ ಅನುಗುಣವಾಗಿ ನಡೆದುಕೊಳ್ಳುವ ಧೈರ್ಯವಿರಲಿಲ್ಲ. ಅವರು ಈ ವಿವಾಹಕ್ಕೆ ಬರಲು ಮನಸ್ಸು ಮಾಡಲಿಲ್ಲ. ಹೀಗೆ ಹಿಂದೇಟು ಹಾಕಿದವರ ಉದಾಹರಣೆಗಳು

ಇನ್ನೂ ಎಷ್ಟೋ ಇವೆ. ಆದರೆ ರಾಮಪ್ರಸಾದರ ಗೈರು ಹಾಜರಿ ವಿದ್ಯಾಸಾಗರರಿಗೆ ಬಹಳ ನೋವನ್ನುಂಟುಮಾಡಿತು. ಯಾಕೆಂದರೆ ಈ ಗೃಹಸ್ಥ ಸಮಾಜದಲ್ಲಿ ಸುಧಾರಣೆಯ ಕಾರ್ಯದಲ್ಲಿ ಮುಂಚೂಣಿಯಲ್ಲಿದ್ದ ಅಧ್ವರ್ಯುಗಳೆನಿಸಿಕೊಂಡಿದ್ದ ರಾಜಾರಾಮ ಮೋಹನರಾಯರ ಮಗನಾಗಿದ್ದ. ಅವರನ್ನು ವಿದ್ಯಾಸಾಗರರೇ ಹೊಸ ಮಾರ್ಗ ನಿರ್ಮಾಣ ಮಾಡಿದ ಮಹಾನುಭಾವನೆಂದು ಪರಿಗಣಿಸುತ್ತಿದ್ದರು. ಈ ವಿವಾಹ ನಡೆಯುವ ಸ್ವಲ್ಪ ಸಮಯದ ಮುಂಚೆ ವಿದ್ಯಾಸಾಗರರೇ ಅವರನ್ನು ಈ ಮದುವೆಗೆ ಬರಲು ಕರೆಯಲು ಹೋಗಿದ್ದರಂತೆ. ರಾಮಪ್ರಸಾದ ತಾನು ಈ ವಿಷಯದಲ್ಲಿ ತೆರೆಯ ಮರೆಯಿಂದ ಸಹಾಯ ಮಾಡುವವರೆಂದೂ ಹೊರಗೆ ಬಂದು ಈ ಸಮಾರಂಭದಲ್ಲಿ ಪಾಲ್ಗೊಳ್ಳ ಬಯಸುವುದಿಲ್ಲವೆಂದೂ ಹೇಳಿದರು. ವಿದ್ಯಾಸಾಗರರು ಸಿಟ್ಟಿನಿಂದ ಕಿಡಿಕಿಡಿಯಾದರು. ಎದುರಿಗೆ ತೂಗುಹಾಕಿದ್ದ ರಾಜಾರಾಮ ಮೋಹನರಾಯರ ಭಾವಚಿತ್ರದ ಕಡೆಗೆ ಕೈಮಾಡಿ ತೋರಿಸಿ "ಈ ಭಾವಚಿತ್ರವನ್ನು ಅಲ್ಲಿಂದ ಕಿತ್ತೆಸೆಯಿರಿ" ಎಂದು ಹೇಳಿದರಂತೆ. ಈ ಶಬ್ದಗಳು ಕಠೋರವಾಗಿದ್ದವೇನೋ ನಿಜ. ಆದರೆ ಅವು ಒಂದು ದುಃಖತಪ್ತ ಆತ್ಮದಿಂದ ಹೊರಹೊಮ್ಮಿದ ಶಬ್ದಗಳಾಗಿದ್ದವು.

ಎರಡನೇ ವಿಧವಾ ಪುನರ್ವಿವಾಹ ಮರುದಿನ ನಡೆಯಿತು. ಅದು ಮಧುಸೂದನ ಘೋಷ್ ಹಾಗೂ ಠಾಕಾಮಣಿಯೊಂದಿಗೆ ನಡೆದ ವಿವಾಹ.

ಅನೇಕ ವಿಧವಾ ಪುನರ್ವಿವಾಹಗಳು ವಿದ್ಯಾಸಾಗರರ ಸ್ವತಃ ಜವಾಬ್ದಾರಿಯಿಂದ ಮಾಡಿದವಾಗಿದ್ದವು. ವಿಧಿವತ್ತಾದ ಸಮಾರಂಭ ಜರುಗಿಸುವುದರಿಂದ ಮಾತ್ರ ತಮ್ಮ ಜವಾಬ್ದಾರಿ ಮುಗಿಯಿತೆಂದು ವಿದ್ಯಾಸಾಗರರು ಭಾವಿಸಿರಲಿಲ್ಲ. ಹೊಸದಾಗಿ ಈ ರೀತಿ ಮದುವೆಯಾದ ದಂಪತಿಗಳು ಎಲ್ಲ ರೀತಿಯಿಂದ ಅನ್ಯೋನ್ಯವಾಗಿ ಸುಖವಾಗಿ ಬಾಳುವೆ ಮಾಡುವುದಕ್ಕೆ ಎಲ್ಲ ರೀತಿಯ ಸಹಾಯ ಮಾಡಿ, ಅವರು ಸುಖವಾಗಿರುವುದನ್ನು ನೋಡಿ ಸಂತೋಷಪಡುತ್ತಿದ್ದರು. ವಿಧವೆಯರ ಪುನರ್ವಿವಾಹ ಅನೇಕ ಸಲ ಬಹಳ ಖರ್ಚಿನ ಜವಾಬ್ದಾರಿಯಾಗಿರುತ್ತಿತ್ತು. ವರದಕ್ಷಿಣೆ, ಆಭರಣ ಹಾಗೂ ಉಳಿದ ವರೋಪಚಾರದ ವ್ಯವಸ್ಥೆ ಮಾಡಬೇಕಾಗುತ್ತಿತ್ತು. ಇದಕ್ಕೆಲ್ಲ ಬಹಳಷ್ಟು ಹಣ ಬೇಕಾಗುತ್ತಿತ್ತು. ಇದನ್ನು ಒದಗಿಸುವುದು ತಮ್ಮ ಜವಾಬ್ದಾರಿಯೆಂದು ವಿದ್ಯಾಸಾಗರರು ಬಗೆಯುತ್ತಿದ್ದರು. ಹಾಗೆ ಮಾಡದಿದ್ದರೆ ವಿಧವೆಯನ್ನು ಮದುವೆಯಾಗಲು ಯಾರೂ ಮುಂದೆ ಬರುತ್ತಿರಲಿಲ್ಲ. ಅದಕ್ಕಾಗಿ ಈ ವಿವಾಹಗಳನ್ನು ಭರ್ಜರಿಯಾಗಿ ನಡೆಸಲು ವಿದ್ಯಾಸಾಗರರು ಬಹಳಷ್ಟು ಹಣ ಖರ್ಚುಮಾಡುತ್ತಿದ್ದರು. ಅದಕ್ಕಾಗಿ ಅವರು ಅನೇಕರಿಂದ ಸಾಲ ಕೂಡ ತೆಗೆದುಕೊಳ್ಳುತ್ತಿದ್ದರು. ಹಾಗೆಯೇ ಸಾಲ ತೆಗೆದುಕೊಂಡ ಹಣವನ್ನು ಧಾರಾಳವಾಗಿ ಖರ್ಚುಮಾಡುತ್ತಿದ್ದರು. ಇದರಿಂದ ಅವರಿಗೆ ಸಾಲದ ಭಾರ ಹೆಚ್ಚುತ್ತ ಹೋಯಿತು. ಒಂದೊಂದು ವಿವಾಹಕ್ಕೆ ಅವರು ಆಗಿನ ದಿನಮಾನದಲ್ಲಿ 10,000 ರೂಪಾಯಿಗಳನ್ನು ಖರ್ಚುಮಾಡಿದ್ದುಂಟು. ಈ

ವಿಷಯದ ಅತ್ಯಂತ ವಿಪರ್ಯಾಸದ ಸಂಗತಿಯೆಂದರೆ, ಸುಧಾರಣೆಯ ಮೊದಲಿನ ಉತ್ಸಾಹದಲ್ಲಿ ಎಲ್ಲ ರೀತಿಯ ಸಹಾಯ ಮಾಡುವ ಆಶ್ವಾಸನೆ ಕೊಟ್ಟ ಅನೇಕರು ನಂತರ ಸಹಾಯ ಮಾಡಲು ನಿರಾಕರಿಸಿದರಷ್ಟೇ ಅಲ್ಲ, ಅವರು ವಿದ್ಯಾಸಾಗರರಿಗೂ ಅವರ ಈ ಕಾರ್ಯಕ್ಕೂ ಹಿಂದೇಟು ಹಾಕಿ ದ್ರೋಹ ಬಗೆದರು. ಎಲ್ಲ ಸಾಲದ ಹೊರೆ ಹೊತ್ತುಕೊಂಡು ಅವರನ್ನು ಏಕಾಂಗಿಯಾಗಿ ಹೋರಾಟ ಮಾಡಲು ಕೈಬಿಟ್ಟು ಅವರೆಲ್ಲಾ ದೂರ ಸರಿದರು. ಸುರೇಂದ್ರನಾಥ ಬ್ಯಾನರ್ಜಿಯವರ ತಂದೆಯವರಾದ ದುರ್ಗಾಚರಣ ಬ್ಯಾನರ್ಜಿಯವರಿಗೆ ವಿದ್ಯಾಸಾಗರರು ಪತ್ರ ಬರೆದು, ತಾವು ಅವರಿಂದ ತೆಗೆದುಕೊಂಡ ಸಾಲದ ಹಣವನ್ನು ತೀರಿಸಲು ಆಗುವುದಿಲ್ಲವೆಂದು ತಿಳಿಸಿದರು. ಯಾಕೆಂದರೆ ಮೊದಲು ಸಹಾಯ ಮಾಡಲು ಮಾತು ಕೊಟ್ಟ ಎಲ್ಲರೂ ವಚನ ಭ್ರಷ್ಟರಾದ್ದರಿಂದ ತಾವು ಅಸಹಾಯಕರಾಗಿದ್ದಾರೆಂದು ತಿಳಿಸಿ ಅವರ ಕ್ಷಮೆ ಕೋರಿದರು. ದಿನಗಳೆದಂತೆ ಸಾಲದ ಭಾರ ಹೆಚ್ಚುತ್ತಲೇ ಹೋಯಿತು. ಹಾಗೂ ಅವರ ವಿರುದ್ಧ ಅನೇಕರ ವಿರೋಧದ ಬೊಬ್ಬಾಟ ಹೆಚ್ಚಾಯಿತು. ಆದರೂ ತಮ್ಮ ಜೀವನದ ಕೊನೆಯವರೆಗೆ ಅವರು ಹಿಡಿದ ಕಾರ್ಯ ಬಿಟ್ಟುಕೊಡಲಿಲ್ಲ. ಅವರು ಹಳ್ಳಿಗಾಡಿನಲ್ಲಿ ಕೂಡ ವಿಧವಾ ಪುನರ್ವಿವಾಹದ ಪ್ರಸಾರ ಕಾರ್ಯ ಕೈಗೊಂಡರು. ಅತ್ಯಂತ ಪ್ರಗತಿಪರ ವಿಚಾರದವರಾದ ಅವರ ತಾಯಿ ಈ ವಿಷಯದಲ್ಲಿ ಅವರಿಗೆ ಅನೇಕ ರೀತಿಯಿಂದ ನೆರವಾದರೆಂದು ವಿದ್ಯಾಸಾಗರರ ಅಣ್ಣಂದಿರಾದ ಶಂಭುಚರಣ ವಿದ್ಯಾರತ್ನ ಅವರು ಹೇಳುತ್ತಿದ್ದರು. ಪುನರ್‌ವಿವಾಹ ಮಾಡಿಕೊಂಡ ದಂಪತಿಗಳಿಗೆ ಕೆಲವು ಸಲ ವಿದ್ಯಾಸಾಗರರ ಹಳ್ಳಿಯ ಮನೆಯಲ್ಲಿ ಆಶ್ರಯ ದೊರಕುತ್ತಿತ್ತು.

ಅವರ ಒಬ್ಬನೇ ಮಗನಾದ ನಾರಾಯಣಚಂದ್ರನು ಓರ್ವ ವಿಧವೆಯನ್ನು ಮದುವೆಯಾದಾಗ ಅವರಿಗೆ ಜಾತಿಯಿಂದ ಹೊರಹಾಕಲ್ಪಡುವ ಬೆದರಿಕೆ ಹಾಕಲಾಯಿತು. ಅವರು ತಮ್ಮ ಅಣ್ಣ ಶಂಭುಚಂದ್ರ ವಿದ್ಯಾರತ್ನ ಅವರಿಗೆ "ನಾನು ಜೀವಮಾನದಲ್ಲಿ ಮಾಡಿದ ಒಳ್ಳೇ ಕಾರ್ಯಗಳಲ್ಲಿ, ಅತ್ಯಂತ ಉದಾತ್ತವಾದ ಕಾರ್ಯವೆಂದರೆ ವಿಧವಾ ಪುನರ್‌ವಿವಾಹ. ಅದಕ್ಕಿಂತಲೂ ಉದಾತ್ತವಾದ ಯಾವ ಕಾರ್ಯವೂ ಈ ಜೀವಮಾನದಲ್ಲಿ ನನ್ನಿಂದ ನಡೆಯುವುದು ಸಾಧ್ಯವಿಲ್ಲ. ಅದಕ್ಕಾಗಿ ನನ್ನ ಎಲ್ಲವನ್ನೂ ಕೊಟ್ಟಿದ್ದೇನೆ. ಅದಕ್ಕಾಗಿ ನನ್ನ ಜೀವನವನ್ನೂ ಕೊಡಲು ನಾನು ಸಿದ್ಧ. ಈ ವಿವಾಹದಿಂದ ನನ್ನ ಸಂಬಂಧಿಗಳ ಸಂಪರ್ಕ ಕಳೆದುಕೊಳ್ಳುವದು ಅತಿ ಸಣ್ಣ ತ್ಯಾಗ ಮಾತ್ರ. ನಾನು ಸಾಮಾಜಿಕ ಪದ್ಧತಿಗಳ ಗುಲಾಮನಲ್ಲ. ನನಗೂ ಸಮಾಜಕ್ಕೂ ಯಾವುದು ಒಳ್ಳೆಯದು ಎಂದು ನಾನು ತಿಳಿಯುತ್ತೇನೆಯೋ ಅದನ್ನೇ ನಾನು ಯಾವಾಗಲೂ ಮಾಡುತ್ತೇನೆ. ಜನರು ಅಥವಾ ಸಂಬಂಧಿಕರು ಟೀಕಿಸುವರೆಂಬ ಹೆದರಿಕೆಯಿಂದ ನಾನು ನನ್ನ ಪಥದಿಂದ ಎಂದೂ ವಿಚಲಿತನಾಗಲಾರೆ" ಎಂದು ಹೇಳಿದರು.

ವಿಧವಾ ಪುನರ್ವಿವಾಹ ಆಂದೋಲನ ಮೊದಲಿಗೇನೋ ಒಳ್ಳೇ ರಭಸದಿಂದ ಆರಂಭವಾಯಿತು. ಆದರೆ ದಿನಗಳೆದಂತೆ ಅದರ ಬಗ್ಗೆ ಉತ್ಸಾಹ ಕಡಿಮೆಯಾಗತೊಡಗಿತು. ಆಗೊಮ್ಮೆ ಈಗೊಮ್ಮೆ ಇದರ ಬಗ್ಗೆ ವಿವಾದಗಳು ಉದ್ಭವಿಸುತ್ತಿದ್ದವು. ಆದರೆ ಮೊದಲಿನ ಉತ್ಸಾಹ ಇಲ್ಲದಾಯಿತು. ಎಷ್ಟೋ ಜನ ಸಮಯಸಾಧಕರು ವಿಪುಲ ಹಣದ ಆಮಿಷಕ್ಕಾಗಿ ಇಂಥ ವಿವಾಹಕ್ಕೆ ಮುಂದಾದರು. ಆದರೆ ಕೊನೆಗೆ ಆ ಹುಡಿಗಿಯರಿಗೆ ದ್ರೋಹ ಬಗೆಯುತ್ತಿದ್ದರು. ಈ ಪ್ರಗತಿಪರ ವಿಚಾರಗಳನ್ನು ಅಳವಡಿಕೊಳ್ಳುವ ವಿಚಾರದಲ್ಲಿ ಸಮಾಜವೂ ಬಹಳ ಮಂದಗತಿಯಿಂದ ಸಾಗಿತ್ತು. ಇದನ್ನು ಕಂಡು ವಿದ್ಯಾಸಾಗರರ ಹೃದಯ ನೊಂದಿತು. ಆದರೆ ಅವರು ತಮ್ಮ ಈ ಗುರಿಯ ಬಗ್ಗೆ ನಿರಾಶರಾಗಲಿಲ್ಲ.

ವಿದ್ಯಾಸಾಗರರ ಪ್ರಗತಿಪರ ವಿಚಾರಗಳು ಆಗಿನ ಕಾಲಕ್ಕೆ ಬಹಳ ಕ್ರಾಂತಿಕಾರಕವಾಗಿದ್ದವು. ಆದರೆ ಎಲ್ಲ ಹೊಸ ವಿಚಾರಗಳ ಗತಿಯೇ ಹೀಗೆ. ಎಲ್ಲ ಸುಧಾರಣೆಗಳು ಮೊದಲು ಒಬ್ಬರಿಂದಲೋ, ಜ್ಞಾನಿಗಳಾದ ಸ್ವಲ್ಪ ಜನರ ಗುಂಪಿನಿಂದಲೋ ಆರಂಭವಾಗುವುದುಂಟು. ಇಂಥ ಅನೇಕ ವಿಚಾರಗಳು ಕೆಲವು ವೇಳೆ ಮುಂದಾಲೋಚನೆಗಳಾಗಿದ್ದು ಆಗಿನ ಕಾಲಕ್ಕೆ ಅಷ್ಟಾಗಿ ಅನ್ವಯಿಸದೇ ಇರಬಹುದು. ಕಾಲ ಕಳೆದಂತೆ ಈ ಕ್ರಾಂತಿಕಾರಕ ವಿಚಾರಗಳು ಸತ್ಯವಾದವುಗಳೆಂದು ಸಾವಕಾಶವಾಗಿ ಜನರಿಗೆ ಗೋಚರವಾಗತೊಡಗುತ್ತದೆ. ವಿಧವಾ ಪನರ್ವಿವಾಹದ ವಿಷಯದಲ್ಲಿಯೂ ಹಾಗೆಯೆ ಆಯಿತು. ನಿಂತ ನೀರಿನಂಥ ನಿರ್ಜೀವ ಸಮಾಜದಲ್ಲಿ ಸ್ತ್ರೀ ಕೆಳಮಟ್ಟದವಳೆಂದು ಪರಿಗಣಿಸಲ್ಪಡುತ್ತಿದ್ದ ದೇಶದಲ್ಲಿ ಭಾರತದ ರಾಜ್ಯಾಂಗ ಸ್ತ್ರೀಗೆ ಪುರುಷನ ಸಮಾನಸ್ಥಾನ ಒದಗಿಸಿದೆ. ಹೆಣ್ಣು ಮಕ್ಕಳಿಗೆ ಮನೆತನದ ಆಸ್ತಿಯ ಹಕ್ಕಿನೊಂದಿಗೆ ಪುನರ್ವಿವಾಹದ ಹಕ್ಕಿಗಿಂತ ಹೆಚ್ಚಿನದಾದ ವಿವಾಹ ವಿಚ್ಛೇದನ ಹಕ್ಕನ್ನು ಅದು ಒದಗಿಸಿದೆ. ಇವೆಲ್ಲ ಹಕ್ಕುಗಳ ಪೂರೈಕೆಗೆ ಒಂದು ನೂರು ವರ್ಷದ ಹಿಂದೆಯೇ ಅಡಿಪಾಯ ಹಾಕಿದ ಈ ಸರಳ ಸ್ವಭಾವದ ನಿರ್ಭೀತ ಸಮಾಜ ಸುಧಾರಕ ತಮ್ಮ ಕಾಲಕ್ಕಿಂತ ಬಹು ದೂರದ ಭವಿಷತ್ತನ್ನು ನೋಡಬಲ್ಲವರೂ ಹಾಗೂ ಎಲ್ಲ ಸಮಕಾಲೀನರಿಗಿಂತ ಬಹಳ ಎತ್ತರದ ನಿಲುಮೆಯುಳ್ಳವರೂ ಆಗಿದ್ದರು.

# 5. ಬಹುಪತ್ನಿತ್ವ ವಿರೋಧಿ ಆಂದೋಲನ

ಬಲಾತ್ಕಾರದಿಂದ ಹೇರಲ್ಪಟ್ಟ ವೈಧವ್ಯವು ಮಾತ್ರ ವಿದ್ಯಾಸಾಗರರ ವಿರೋಧದ ಕೇಂದ್ರಬಿಂದುವಾಗಿರಲಿಲ್ಲ. ಅದಕ್ಕೆ ಹಾಸುಹೊಕ್ಕಾಗಿದ್ದ ಬಹುಪತ್ನಿತ್ವದ ಕೇಡಿನ ವಿರುದ್ಧವೂ ಅವರು ಹೋರಾಡಬೇಕಾಯಿತು. ದೇಶದಲ್ಲಿ ಇಷ್ಟೊಂದು ವ್ಯಾಪಕವಾಗಿ ವೈಧವ್ಯ ಹೆಚ್ಚಾಗಲು ಆಗಿನ ಕಾಲದಲ್ಲಿ ಪ್ರಚಲಿತವಾಗಿದ್ದ ಬಹುಪತ್ನಿತ್ವ ಒಂದು ಮುಖ್ಯ ಕಾರಣವಾಗಿದ್ದಿತು. ಬಹುಪತ್ನಿತ್ವದ ಪಿಡುಗು ಸಮಾಜದಲ್ಲಿ ಹರಡುತ್ತಿದ್ದ ವಿಷವನ್ನು ತೊಡೆದುಹಾಕಲು ಅದರ ದುಷ್ಪರಿಣಾಮಗಳನ್ನು ಎತ್ತಿ ತೋರಿಸ ಬೇಕಾಯಿತು. ಆದ್ದರಿಂದ ವಿದ್ಯಾಸಾಗರರು ಎರಡು ಅನಿಷ್ಟ ಪದ್ಧತಿಗಳಾದ ಬಲಾತ್ಕಾರ ವೈಧವ್ಯ ಹಾಗೂ ಬಹುಪತ್ನಿತ್ವಗಳ ವಿರುದ್ಧ ಒಮ್ಮೆಲೇ ಯುದ್ಧ ಸಾರಿದರು. 1855 ರಲ್ಲಿ ವಿಧವಾ ಪುನರ್ವಿವಾಹದ ಬಗ್ಗೆ ಎದ್ದ ವಾದ ಪ್ರತಿವಾದಗಳ ಗೊಂದಲ ಅತ್ಯಂತ ತೀಕ್ಷ್ಣ ಮಟ್ಟದಲ್ಲಿದ್ದಾಗ, ಅವರು 2,500 ಜನರಿಂದ ಸಹಿ ಮಾಡಿಸಿ ಬಹು ಪತ್ನಿತ್ವವನ್ನು ಕಾಯ್ದೆಬಾಹಿರಗೊಳಿಸಬೇಕೆಂದು ಲೆಜಿಸ್ಲೇಟಿವ್ ಕೌನ್ಸಿಲ್ಲಿಗೆ ಮನವಿ ಸಲ್ಲಿಸಿದರು. ಈ ಮನವಿಗೆ, ಸಮಾಜದ ಅತ್ಯುನ್ನತ ಸ್ಥಾನದಲ್ಲಿದ್ದ ಹಲವಾರು ವ್ಯಕ್ತಿಗಳು ಅಂಕಿತ ಹಾಕಿದ್ದರು.

ಆಗಿನ ಕಾಲದಲ್ಲಿ ಪ್ರಚಲಿತವಿದ್ದ ಕುಲೀನ ಪದ್ಧತಿ ಹಾಗೂ ಬಹುಪತ್ನಿತ್ವ ಇವುಗಳ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ದೀರ್ಘವಾಗಿ ಪ್ರಸ್ತಾಪಿಸಲಾಗಿದೆ. ಮನುವಿನ ಅಭಿಪ್ರಾಯದ ಪ್ರಕಾರ ಒಬ್ಬ ವ್ಯಕ್ತಿ ತನ್ನ ಮಗಳನ್ನು ಜೀವನಪರ್ಯಂತ ಅವಿವಾಹಿತೆಯಾಗಿ ಉಳಿಯುವಂತೆ ಮಾಡಿ ಮನೆಯಲ್ಲಿಟ್ಟುಕೊಂಡರೂ ಅಡ್ಡಿ ಇಲ್ಲ. ಅನರ್ಹನಾದವನಿಗೆ ಎಂದೂ ಲಗ್ನ ಮಾಡಿಕೊಡತಕ್ಕದ್ದಲ್ಲ ಎಂಬುದಾಗಿತ್ತು. ಈ ಸಾಮಾನ್ಯ ತತ್ವವನ್ನು ಅತಿರೇಕಕ್ಕೆಳೆಯಲಾಯಿತು. ಒಬ್ಬ ಉಚ್ಚ ಕುಲದ ವರ ದೊರೆಯದಿದ್ದರೆ ತಮ್ಮ ಹೆಣ್ಣುಮಕ್ಕಳನ್ನು ಅನೇಕ ಮಡದಿಗಳಿರುವ ಮುದುಕನಿಗಾದರೂ ಕೊಟ್ಟು ಮದುವೆ ಮಾಡಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳುತ್ತಿದ್ದರು. ಇಂಥ ತಂದೆ ತಾಯಿಗಳ ಉದ್ದೇಶ ಮದುವೆಯೆಂಬ ಒಂದು ಆಚಾರವನ್ನು ಪೂರೈಸುವುದಾಗಿತ್ತೇ ವಿನಹ ತಮ್ಮ ಮಕ್ಕಳ ಯೋಗಕ್ಷೇಮವಾಗಿರಲಿಲ್ಲ. ಒಂದು ಕ್ರೂರ ಸಮಾಜ ಪದ್ಧತಿಗಾಗಿ ಎಳೆಯ ಹೆಣ್ಣು ಹುಡುಗಿಯರ ಬಲಿದಾನವಾಗುತ್ತಿತ್ತು.

ಸಮಾಜ ಪದ್ಧತಿಯೆಂಬ ಈ ಭದ್ರ ಕೋಟೆಯ ಮೇಲೆ ವಿದ್ಯಾಸಾಗರರು ಮತ್ತೆ ಧಾಳಿ ಆರಂಭಿಸಿದರು. ಈ ಸಲ ಬಹುಪತ್ನಿತ್ವದ ವಿರುದ್ಧ 'ಬಹುಪತ್ನಿ

ವಿರೋಧ ಮನವಿ' ಯನ್ನು ಸರಕಾರಕ್ಕೆ ಸಲ್ಲಿಸಿದರು. ಇದರ ಬಗ್ಗೆ ಮಸೂದೆಯನ್ನು ಜೆ.ಪಿ.ಗ್ರ್ಯಾಂಟರು ಒಪ್ಪಿಸುವರೆಂದು ಮನವಿಯಲ್ಲಿ ಕಾಣಿಸಲಾಗಿತ್ತು. ಆದರೆ ವಿಧವಾ ಪುನರ್ವಿವಾಹ ಆಗ ಹೆಚ್ಚು ಜ್ವಲಂತ ಸಮಸ್ಯೆಯಾಗಿದ್ದ ಕಾರಣ ಅದು ಹೆಚ್ಚಿನ ಗಮನ ಸೆಳೆಯಿತು. 1857 ರಲ್ಲಿ ಸಿಪಾಯಿ ದಂಗೆ ಆರಂಭವಾಯಿತು. ಬ್ರಿಟಿಷ್ ಸರ್ಕಾರದ ಎಲ್ಲ ಲಕ್ಷ್ಯ ಈ ದಂಗೆ ಸದೆಬಡೆಯುವುದರ ಕಡೆಗೆ ಕೇಂದ್ರೀಕೃತವಾಯಿತು. ಆದ್ದರಿಂದ ಸಮಾಜ ಸುಧಾರಣೆಯ ಸರ್ಕಾರಿ ಹಾಗೂ ಸರ್ಕಾರೇತರ ಎಲ್ಲ ಕಾರ್ಯಗಳೂ ಉಪೇಕ್ಷಿಸಲ್ಪಟ್ಟವು. ಈ ಎಲ್ಲ ಮಸೂದೆಗಳನ್ನು ಶೈತ್ಯಾಗಾರದಲ್ಲಿ ಡಲಾಯಿತು. ಕೆಲವು ಜನ ವಿಧವಾ ಪುನರ್ವಿವಾಹ ಕಾಯಿದೆಗೆ ಮನ್ನಣೆಯಿತ್ತದ್ದು ದಂಗೆಗೆ ಒಂದು ಕಾರಣವಾಯಿತೆಂದು ಹೇಳಿದ್ದುಂಟು. ಎಷ್ಟೋ ಕಾಲ ಎಲ್ಲೆಡೆಗೆ ಗಾಬರಿಯ ವಾತಾವರಣ ಕಂಡುಬಂದಿತು. ಈಸ್ಟ್ ಇಂಡಿಯಾ ಕಂಪನಿ ಬ್ರಿಟಿಷ್ ರಾಜರಿಂದ ಸಂಪೂರ್ಣ ಅಧಿಕಾರ ವಹಿಸಿಕೊಂಡ ನಂತರ ಭಾರತ ಹಾಗೂ ಭಾರತೀಯರ ಬಗೆಗೆ ಸರ್ಕಾರದ ಧೋರಣೆ ಬಹಳಷ್ಟು ಬದಲಾವಣೆಗೊಂಡಿತು. ರಾಣಿಯವರ ಘೋಷಣೆಯಲ್ಲಿ 'ಸರ್ಕಾರವು ಪ್ರಜೆಗಳ ಧಾರ್ಮಿಕ ನಂಬಿಕೆಗಳು ಹಾಗೂ ಪೂಜಾರಿಗಳಿಗೆ ಯಾವ ರೀತಿಯಿಂದಲೂ ಅಡ್ಡಿಬರುವುದಿಲ್ಲ. ಇವುಗಳಿಂದ ಅದು ದೂರ ಉಳಿಯುವುದು' ಎಂಬ ಭರವಸೆ ಕೊಡಲಾಗಿತ್ತು. 1857 ರ ಸಿಪಾಯಿ ದಂಗೆಯ ನಂತರ, ಭಾರತದ ಸಮಾಜ ಸುಧಾರಣೆಯ ಕಾರ್ಯಗಳ ಬಗ್ಗೆ ಸಹಾಯ ಮಾಡುವ ಧೋರಣೆ ಕೊನೆಗೊಂಡಿತು.

ವಿದ್ಯಾಸಾಗರರು ಸೋಲುವ ವ್ಯಕ್ತಿಯಾಗಿರಲಿಲ್ಲ. ಗಡಚಿಕ್ಕುವ ವಿರೋಧದ ಧ್ವನಿ ಪ್ರತಿಧ್ವನಿಗಳು ಕಡಿಮೆಯಾದ ನಂತರ 1866 ರ ಫೆಬ್ರವರಿ ತಿಂಗಳಲ್ಲಿ ಮತ್ತೆ ತಮ್ಮ ಆಂದೋಲನ ಆರಂಭಿಸಿದರು. ಸರ್ಕಾರಕ್ಕೆ ಬಹುಪತ್ನಿತ್ವ ವಿರೋಧಿ ಮಸೂದೆಯನ್ನು ಅಂಗೀಕರಿಸಬೇಕೆಂದು ಮನವಿ ಸಲ್ಲಿಸಿದರು. ಬಂಗಾಲದ ಪ್ರಮುಖ ಮುಖಂಡರನ್ನೊಳಗೊಂಡ 21,000 ಜನರು ಅದಕ್ಕೆ ಅಂಕಿತ ಹಾಕಿದ್ದರು. ಹಲವು ಉನ್ನತ ಮಟ್ಟದ ಮುಖಂಡರೊಂದಿಗೆ ಬಂಗಾಲದ ಲೆಫ್ಟಿನೆಂಟ್ ಗವರ್ನರ್ ಬಳಿಗೆ ಒಂದು ನಿಯೋಗವನ್ನು ತೆಗೆದುಕೊಂಡು ಹೋದರು. ಹೀಗಾಗಿ ಬಹುಪತ್ನಿತ್ವ ವಿರೋಧಿ ಆಂದೋಲನ ಪುನಶ್ಚೇತನಗೊಂಡಿತು.

ಆದರೆ ಈ ಸಲ ಸರ್ಕಾರ ಹೆಚ್ಚು ಎಚ್ಚರಿಕೆಯಿಂದ ವರ್ತಿಸಿತು. ಈ ಸಮಸ್ಯೆಯ ಅಭ್ಯಾಸಕ್ಕಾಗಿ ಒಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿ ಬಹು ಪತ್ನಿತ್ವದಿಂದ ಸಮಾಜಕ್ಕೆ ಉಂಟಾಗುವ ಕೇಡನ್ನು ಒಪ್ಪಿಕೊಂಡಿತಾದರೂ, ಈ ದುಷ್ಟ ಪದ್ಧತಿಯ ಉಚ್ಚಾಟನೆಗೆ ಮಸೂದೆಯನ್ನು ತರಬೇಕೆಂದು ಸೂಚಿಸಲಿಲ್ಲ. ಬಂಗಾಳದ ಬಹುತೇಕ ಜನತೆ ಕಾಯಿದೆಯಿಂದ ಈ ಪದ್ಧತಿಯ ಉಚ್ಚಾಟನೆಗೆ ವಿರೋಧಿಯಾಗಿತ್ತೆಂದು ಮನಗಂಡಂತೆ ಕಂಡುಬಂದಿತು. ವಿಧವಾ ಪುನರ್ವಿವಾಹದ ಬಗೆಗೆ ವಿವೇಕಿಗಳಾದ ಅಲ್ಪಸಂಖ್ಯಾತರ ಅಭಿಪ್ರಾಯವನ್ನು ಸ್ವೀಕರಿಸಲು ಸಿದ್ಧವಾಯಿತು. ಆದರೆ ಬಹುಪತ್ನಿತ್ವದ

ಬಗ್ಗೆ ಹಾಗೆ ಮಾಡಲು ಸಿದ್ಧವಿರಲಿಲ್ಲ. ಬಹುಪತ್ನಿತ್ವವನ್ನು ಉಚ್ಚಾಟನೆಗೊಳಿಸದೆ, ವಿಧವಾ ಪುನರ್ವಿವಾಹವನ್ನು ಮಾತ್ರ ಮನ್ನಿಸುವುದು, ಸಮಾಜ ಕ್ರಾಂತಿಯನ್ನು ಅರ್ಧಕ್ಕೆ ನಿಲ್ಲಿಸಿದಂತಾಗಿತ್ತು. ಸಮಾಜವೇ ಅದನ್ನು ಅರ್ಥ ಮಾಡಿಕೊಂಡು, ಸಾವಕಾಶವಾಗಿ ಏಕಪತ್ನಿತ್ವವೇ ಸಮಾಜದ ಬಹುತೇಕ ಎಲ್ಲ ಜನರಿಗೂ ಒಳ್ಳೇ ಪದ್ಧತಿಯೆಂದು ಅರಿತು ಕಾರ್ಯಾಚರಣೆಯಲ್ಲಿ ತರುವವರೆಗೆ, ಈ ವಿಚಾರ ಕ್ರಾಂತಿ ಸಾವಕಾಶವಾಗಿ ಮಂದಗತಿಯಿಂದ ಸಾಗಬೇಕಾಯಿತು.

ವಿದ್ಯಾಸಾಗರರ ಆದರ್ಶ ಹಾಗೂ ಧ್ಯೇಯಗಳು ಬಹಳ ಉದಾತ್ತವಾಗಿದ್ದವು. ಅವುಗಳ ಬಗ್ಗೆ ಅವರ ಛಲ ಅಷ್ಟೇ ಕಠೋರವಾಗಿತ್ತು. ಅವರು ಸ್ವಲ್ಪ ನಿರಾಶೆಯಿಂದ ತೊಯ್ದು ತಪ್ಪಡಿಯಾಗುವವರಾಗಿರಲಿಲ್ಲ. ಇದರಿಂದ ಅವರಲ್ಲಿ ಹುದುಗಿದ್ದ ಹೋರಾಟಗಾರನ ಛಲ ಮತ್ತಷ್ಟು ಜಾಗ್ರತೆಗೊಂಡಿತು. ಅವರು ಸೋಲನ್ನೊಪ್ಪಲು ಸಿದ್ಧವಿರಲಿಲ್ಲ. ಸರ್ಕಾರದಿಂದ ಬಹುಪತ್ನಿತ್ವದ ವಿರುದ್ಧ ಕಾನೂನು ಪಾಸು ಮಾಡುವುದರಲ್ಲಿ ವಿಫಲರಾದ ಅವರು ಬೇರೆ ತಂತ್ರವನ್ನು ಯೋಚಿಸತೊಡಗಿದರು. ಅವೆಂದರೆ ಬಹುಪತ್ನಿತ್ವದ ವಿರುದ್ಧ ಒಂದು ಸಾರ್ವಜನಿಕ ಆಂದೋಲನವನ್ನೇ ಆರಂಭಿಸುವುದು. ಅದಕ್ಕಾಗಿ ಅವರು ಮತ್ತೆ ತಮ್ಮ ಲೇಖನಿಯನ್ನು ಎತ್ತಿಕೊಂಡರು. ಈ ಸಲ ಬಹುಪತ್ನಿತ್ವದ ವಿರುದ್ಧ. ಹಿಂದೊಮ್ಮೆ ಅದು ವಿಧವಾ ಪುನರ್ವಿವಾಹದ ಆಂದೋಲನಕ್ಕಾಗಿ ಬಳಸಲ್ಪಟ್ಟಿತ್ತು. ಇದಕ್ಕಾಗಿ ಅವರು ಸಮಾಜ ಪದ್ಧತಿಗಳ ತೀಕ್ಷ್ಣ ಪರಿಜ್ಞಾನ ಹಾಗೂ ಶಾಸ್ತ್ರಗಳ ಆಳವಾದ ಅಭ್ಯಾಸಗಳನ್ನು ಬಳಸಿಕೊಂಡು ಮತ್ತೆ ಬರೆಯತೊಡಗಿದರು. ಮುಪ್ಪಿನಿಂದ ಬಾಗಿ, ದೇಹದಿಂದ ಅಶಕ್ತರಾಗಿದ್ದರೂ 1871ರ ಆಗಸ್ಟ್ ಹಾಗೂ 1873 ರ ಏಪ್ರಿಲ್ ತಿಂಗಳಲ್ಲಿ ಬಹುಪತ್ನಿತ್ವದ ವಿರುದ್ಧ ಎರಡು ಬೃಹದ್ಗ್ರಂಥಗಳನ್ನು ಪ್ರಕಟಿಸಿದರು. ಈ ಎರಡೂ ಗ್ರಂಥಗಳು ಶಾಸ್ತ್ರಗಳಲ್ಲಿ ಅವರಿಗಿದ್ದ ಆಳವಾದ ಜ್ಞಾನವನ್ನು ಎತ್ತಿ ತೋರಿಸುವಂತಹವಾಗಿದ್ದವು. ಬಳಕೆಯಲ್ಲಿದ್ದ ಬಹುಪತ್ನಿತ್ವಕ್ಕೆ ಶಾಸ್ತ್ರದ ಮನ್ನಣೆಯಿರಲಿಲ್ಲವೆಂದು ಶಾಸ್ತ್ರಗಳ ಆಧಾರದಿಂದ ಅವರು ತೋರಿಸಿಕೊಟ್ಟರು. ಬಹುಪತ್ನಿತ್ವಕ್ಕೆ ಧಾರ್ಮಿಕ ಒತ್ತಾಯವಂತೂ ಎಳ್ಳಷ್ಟೂ ಇರಲಿಲ್ಲ. ಸಾಮಾಜಿಕ ದುಷ್ಟ ಪದ್ಧತಿಗಳಾದ ವರದಕ್ಷಿಣೆ, ಬಾಲ್ಯವಿವಾಹಗಳೂ ಸೇರಿದಂತೆ ಬಹುಪತ್ನಿತ್ವ ಪದ್ಧತಿಯನ್ನು ಅವರು ಕಟುವಾಗಿ ಟೀಕಿಸಿದರು. ಅವರು ಬಳಿಸಿದ ಭಾಷೆ ಎಂದೂ ಗಾಂಭೀರ್ಯವನ್ನು ಕಳೆದುಕೊಳ್ಳಲಿಲ್ಲವಾದರೂ ಬಹಳ ತೀವ್ರವಾಗಿ ಈ ಅನಿಷ್ಟ ಪದ್ಧತಿಗಳನ್ನು ಟೀಕಿಸಿದರು.

ಬಹುಪತ್ನಿತ್ವ ಹಾಗೂ ಕುಲೀನ ಪದ್ಧತಿಗಳನ್ನು ವಿರೋಧಿಸುವ ಅವರ ಬರಹಗಳು ಅತ್ಯಂತ ಕಟುವಾಗಿದ್ದವು. ಅನೇಕ ಕುಲೀನರು ಎಂದೋ ತಮ್ಮ ಕುಲೀನತೆಯನ್ನು ಕಳೆದುಕೊಂಡಿದ್ದರೆಂದು ಅವರು ವಾದಿಸಿದರು. ಕುಲೀನ ಪದ್ಧತಿಯ ಇತಿಹಾಸವನ್ನು ಮೊದಲಿನಿಂದ ನೋಡುತ್ತ ಬಂದರೆ ಅದು ಹೇಗೆ ರೊಕ್ಕಕ್ಕಾಗಿ ಅಪವಿತ್ರವಾಗುತ್ತ ಬಂದಿತೆಂಬುದನ್ನೂ, ಅದನ್ನು ಹೇಗೆ ಕೆಲವರು ದುಷ್ಪ್ರಯೋಜನ ಮಾಡಿ ಸಮಾಜವನ್ನು

ಶಿಥಿಲಗೊಳಿಸಿದರೆಂಬುದನ್ನೂ ಎತ್ತಿ ತೋರಿಸಿದರು. ಹೆಣ್ಣಿನ ಸ್ಥಾನಮಾನಗಳನ್ನು ಕೀಳು ದರ್ಜೆಗಿಳಿಸಿ, ಅವರನ್ನು ಅನಂತ ಕಷ್ಟಕ್ಕೊಳಮಾಡಿದ ದೌರ್ಜನ್ಯದ ಬಗ್ಗೆ ಅವರು ತಮ್ಮ ರೋಷವನ್ನು ಹೊರಹೊಮ್ಮಿಸಿ, ಇಂಥ ಶೋಷಣೆಗೊಳಗಾದ ಸ್ತ್ರೀಯರ ಬಗ್ಗೆ ತಮ್ಮ ಅಪಾರ ಅನುಕಂಪವನ್ನು ವ್ಯಕ್ತಪಡಿಸಿದರು. ಬಹುಪತ್ನಿತ್ವದ ಬಗ್ಗೆ ಬರೆದ ಮೊದಲನೇ ಗ್ರಂಥದ ಮುನ್ನುಡಿಯಲ್ಲಿ ಅವರು ಹೀಗೆ ಹೇಳಿದ್ದಾರೆ: "ಹೆಣ್ಣು ತುಲಾನಾತ್ಮಕವಾಗಿ ನೋಡಿದಾಗ ಬಲಹೀನಳು. ಹಾಗೂ ಸಾಮಾಜಿಕ ಪದ್ಧತಿಗಳ ಒತ್ತಾಯದಿಂದ ಗಂಡನ ಅಧೀನಳಾಗಿದ್ದಾಳೆ. ಈ ಬಲಹೀನತೆ ಮತ್ತು ಗಂಡಸಿನ ಅಧೀನತೆಯ ಕಾರಣದಿಂದ ಅವಳು ತನ್ನ ಜೀವನದುದ್ದಕ್ಕೂ ಗಂಡಸಿನ ಅಧೀನದಲ್ಲಿ ತುಚ್ಛವಾದ ಜೀವನ ನಡೆಸಬೇಕಾಗುತ್ತದೆ. ಆಳುವ ಗಂಡನು ಅವಳನ್ನು ಕ್ರೂರವಾಗಿ ನಡೆಯಿಸಿಕೊಂಡು ಅವಳನ್ನು ತನ್ನ ಮನಬಂದಂತೆ ಶೋಷಣೆ ಮಾಡುವುದುಂಟು. ಹೆಣ್ಣು ಇವನ್ನೆಲ್ಲ ಅಸಹಾಯಕಳಾಗಿ ಸಹಿಸಿಕೊಂಡು ತನ್ನ ಜೀವನವನ್ನು ಹೇಗಾದರೂ ನೂಕುತ್ತ ಬದುಕಬೇಕು." ವಿದ್ಯಾಸಾಗರರು ಇಂಥ ಕಟುಸತ್ಯವನ್ನು ನಿಷ್ಠೂರವಾಗಿ ಒಂದು ನೂರು ವರ್ಷಗಳ ಹಿಂದೆಯೇ ಹೇಳಿದರು. ಈ ವಿಷಯದಲ್ಲಿ ಅವರು ಮಾಡಿದ ಒಂದು ಮಹತ್ವದ ಕಾರ್ಯವೆಂದರೆ, ಅವರು ಹೂಗಳಿ ಜಿಲ್ಲೆಯ 133 ಕುಲೀನ ಬ್ರಾಹ್ಮಣರ ಪಟ್ಟಿ ಮಾಡಿ, ಅವರೆಲ್ಲ ತಮ್ಮ ಉಪಜಾತಿಯ ಮೇಲಿನ ಸ್ಥಾನದ ಲಾಭ ಪಡೆದು ವಿವಾಹವೆಂಬ ಪವಿತ್ರ ಬಂಧನವನ್ನು ಹೇಗೆ ಅಪಹಾಸ್ಯಕ್ಕೀಡುಮಾಡಿದ್ದಾರೆಂಬುದನ್ನು ಎತ್ತಿ ತೋರಿಸಿದರು. ಅವರು ಎತ್ತಿ ತೋರಿಸಿದ ಅನೇಕ ಉದಾಹರಣೆಗಳ ಪೈಕಿ ಅತೀ ಸ್ಪಷ್ಟ ಅನ್ಯಾಯದ ಹಲವೇ ಉದಾಹರಣೆಗಳನ್ನು ಕೆಳಗೆ ಕೊಡಲಾಗಿದೆ.

55 ವರ್ಷದ ಭೋಲಾನಾಥ ಬಂದೋಪಾಧ್ಯಾಯ ಎಂಬುವನಿಗೆ 80 ಜನ ಹೆಂಡಿರಿದ್ದರು. 64 ವರ್ಷದ ಭಗವಾನ್ ಛಟ್ಟೋಪಾಧ್ಯಾಯ ಎಂಬುವನಿಗೆ 72 ಜನ ಹೆಂಡಿರಿದ್ದರು. 55 ವರ್ಷದ ಪೂರ್ಣ ಮುಖ್ಯೋಪಾಧ್ಯಾಯನಿಗೆ 62 ಜನ ಹೆಂಡಿರಿದ್ದರು. 40 ವರ್ಷದ ಮಧುಸೂದನ ಮುಖ್ಯೋಪಾಧ್ಯಾಯನಿಗೆ 56 ಜನ ಹೆಂಡಿರಿದ್ದರು. 20 ವರ್ಷದ ದುರ್ಗಾ ಬಂದೋಪಾಧ್ಯಾಯ ಎಂಬುವನು ಆಗಲೇ 16 ಹೆಂಡಿರ ಗಂಡನಾಗಿದ್ದ.

ವಿದ್ಯಾಸಾಗರರು ಬಹುಪತ್ನಿತ್ವದ ವಿರುದ್ಧ ಬರವಣಿಗೆಯ ಮುಖಾಂತರ ಆಂದೋಲನ ಮುಂದುವರಿಸಿದರು. ಆದರೆ ವಿದ್ಯಾಸಾಗರರು ಬಲಾತ್ಕಾರದ ವೈಧವ್ಯದ ಅನಿಷ್ಟ ಪದ್ಧತಿಯ ವಿರುದ್ಧ ಹೋರಾಟ ಮಾಡುತ್ತಿದ್ದಾಗಿನ ಯೌವನ ಚಟುವಟಿಕೆ 50 ವರ್ಷ ತೀರಿದ ವಯಸ್ಸಿನಲ್ಲಿ ಇರಲಿಲ್ಲ. ಅಲ್ಲದೇ ಆರೋಗ್ಯವೂ ಸರಿಯಿಲ್ಲದ್ದರಿಂದ ಅವರು ಅಶಕ್ತರಾಗಿದ್ದರು. ಆದ್ದರಿಂದ ಆ ಹಳೆಯ ಜೋರು ಈ ಬರಹಗಳಲ್ಲಿ ಇರಲಿಲ್ಲ. ಬಹುಪತ್ನಿತ್ವ ವಿರೋಧದ ಆಂದೋಲನದ ಬಗ್ಗೆ ಸ್ವಾಭಾವಿಕವಾಗಿ ಅವರ ಮೇಲೆ ಬೈಗಳ ಹಾಗೂ ಅವಮಾನಗಳ ಸುರಿಮಳೆ ಆಗುತ್ತಲೇ ಇದ್ದಿತು.

ಹಳೆಯವರ ಅಂಥ ಪುರಸ್ಕಾರ ಹಾಗೂ ಪ್ರಗತಿವಿರೋಧ ವಿಚಾರಗಳು ಮತ್ತೆ ತಲೆಯೆತ್ತಿರುವ ಕಾಲದಲ್ಲಿ, ಪ್ರಬಲ ಶಕ್ತಿಗಳ ವಿರುದ್ಧ ತಮ್ಮ ಜೀವನದ ಕೊನೆಯವರೆಗೂ ಅನವರತ ಹೋರಾಟ ನಡೆಸಿದರು.

ಈ ವಿಷಯದ ಬಗ್ಗೆ ಹೇಳುತ್ತಿರುವಾಗ, ಸಮಾಜ ಸುಧಾರಣೆಯ ಕಾರ್ಯದಲ್ಲಿ ವಿದ್ಯಾಸಾಗರರು ನೀಡಿದ ವಿಶೇಷ ಕಾಣಿಕೆಗಳ ಬಗ್ಗೆ ಉಲ್ಲೇಖಿಸಬೇಕು. ಇವುಗಳೆಂದರೆ ಮದುವೆಯ ಒಪ್ಪಿಗೆಯ ವಯಸ್ಸಿನ ಮಸೂದೆ, ಹಾಗೂ ಬಾಲವಿಧವೆಯರ ರಕ್ಷಣೆಯ ಬಗ್ಗೆ ವಿದ್ಯಾಸಾಗರರು ವ್ಯಕ್ತಪಡಿಸಿದ ಅಭಿಪ್ರಾಯಗಳು. 1890 ರಲ್ಲಿ ವಿದ್ಯಾಸಾಗರರು ರೋಗಗ್ರಸ್ತರಾಗಿ ಮರಣಶಯ್ಯೆಯಲ್ಲಿದ್ದಾಗ ಅವರು ಈ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದರು. ಮದುವೆಯ ಒಪ್ಪಿಗೆಯ ವಯಸ್ಸಿನ ಮಸೂದೆಯ ಬಗೆಗೆ ಸರ್ಕಾರವು ವಿದ್ಯಾಸಾಗರರ ಅಭಿಪ್ರಾಯವನ್ನು ಅಪೇಕ್ಷಿಸಿತು. ಸಮಾಜ ಸುಧಾರಕರಾದ ಪಾರ್ಸಿ ಜನಾಂಗದ ಮಲಬಾರಿ ಎಂಬುವರು ಈ ಮಸೂದೆಯ ಕಾರಣಕರ್ತರಾಗಿದ್ದರು. ಅವರು ಸರ್ಕಾರವನ್ನು ವಿದ್ಯಾಸಾಗರರ ಅಭಿಪ್ರಾಯ ತಿಳಿದುಕೊಳ್ಳಲು ಒತ್ತಾಯಿಸಿದರು. ಬಾಲ ವಿವಾಹ ಮತ್ತು ಋತುಮತಿಯಾಗುವುದಕ್ಕಿಂತ ಮುಂಚೆ ಗರ್ಭಾಧಾನ (ಪ್ರಸ್ತ) ಗಳನ್ನು ನಿಯಂತ್ರಿಸುವುದೇ ಈ ಮಸೂದೆಯ ಮುಖ್ಯ ಗುರಿಯಾಗಿತ್ತು. ಗರ್ಭಾಧಾನದ ಸಮಾರಂಭ ಹಿಂದೂಗಳಿಗೆ ಕಡ್ಡಾಯವಾಗಿರುವುದರಿಂದಲೂ ಯಾವ ವಯಸ್ಸಿಗೆ ಹೆಣ್ಣು ಮಕ್ಕಳು ಮೈನೆರೆಯುವರೆಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲದೆ ಇರುವುದರಿಂದಲೂ ಮಸೂದೆಯಲ್ಲಿ ಸೂಚಿಸಲಾಗಿದ್ದ 12 ವರ್ಷ ವಯಸ್ಸನ್ನು ವಿದ್ಯಾಸಾಗರರು ಒಪ್ಪಲಿಲ್ಲ. ಅವರ ಅಭಿಪ್ರಾಯ ಹೀಗಿತ್ತು: "ಹುಡುಗಿ ಋತುಮತಿ ಆಗುವವರೆಗೆ ಗಂಡಹೆಂಡಿರ ಸಂಭೋಗವನ್ನು ಕಾನೂನುಬಾಹಿರವೆಂದು ನಿರ್ಧರಿಸಬೇಕು." ಶೋಷಿತ ಸ್ತ್ರೀ ಜನಾಂಗದ ಪರವಾಗಿ ಕಾಯಿದೆ ಮಾಡುವವರಿಗೆ ವಿದ್ಯಾಸಾಗರರು ಮಾಡಿಕೊಂಡ ಕೊನೆಯ ಹೃದಯಸ್ಪರ್ಶಿ ಮನವಿಯಾಗಿತ್ತದು.. ಅದು ಆರುವ ದೀಪದ ಕೊನೆಯ ಉಜ್ವಲ ಪ್ರಖರ ಮಿಂಚಿನಂತಿತ್ತು.

ಈ ಮಸೂದೆಯ ವಿರುದ್ಧ ಪ್ರಚಂಡ ವಿರೋಧಿ ಚಳುವಳಿಯನ್ನು ಆರಂಭಿಸಿದ ತಿಲಕರ ಅಭಿಪ್ರಾಯಗಳು ಇಲ್ಲಿ ಪ್ರಸ್ತುತ. ವಿದ್ಯಾಸಾಗರರಂತೆ ತಿಲಕರೂ ಸಹ ಹೆಣ್ಣಿನ ವಿವಾಹ ವಯಸ್ಸಿನ ಮಿತಿಯನ್ನು ಕೇವಲ ಅಂಕಿಯಿಂದ ನಿರ್ಧರಿಸದೆ, ಅವಳು ಋತುಮತಿಯಾದಾಗಲೇ ಅವಳು ವಿವಾಹದ ಒಪ್ಪಿಗೆಯ ವಯಸ್ಸನ್ನು ಪಡೆದಳೆಂದು ಬಗೆಯಬೇಕೆಂದು ಅಭಿಪ್ರಾಯಪಟ್ಟರು. ಬಾಲವಿವಾಹಗಳಿಂದ ಉಂಟಾಗುವ ದುಷ್ಪರಿಣಾಮಗಳನ್ನು ತಿಲಕರು ಒಪ್ಪಿಕೊಂಡರೂ ಸಹ ಹಿಂದೂಗಳ ಧಾರ್ಮಿಕ ಮತ್ತು ಸಮಾಜಿಕ ಪದ್ಧತಿಗಳಿಗೆ ಚ್ಯುತಿ ಉಂಟಾಗುವುದರ ಆಧಾರದ ಮೇಲೆ ಮಸೂದೆಯನ್ನು ಆಕ್ಷೇಪಿಸಿದರು.

ಸಮಾಜ ಸುಧಾರಣೆಯ ಇತರ ಕಾರ್ಯಕ್ರಮಗಳಲ್ಲಿಯೂ ವಿದ್ಯಾಸಾಗರರು

ಆಸಕ್ತಿ ವಹಿಸಿದರು. ಅವರು ಪಾಶ್ಚಿಮಾತ್ಯ ಸಂಸ್ಕೃತಿಯ ತೀವ್ರ ಸಂಪರ್ಕದಿಂದ ಬಹಳಷ್ಟು ಹೆಚ್ಚಾಗಿದ್ದ ಕುಡಿಯುವ ಚಟವನ್ನು ಉಚ್ಚಾಟನೆಗೊಳಿಸಲು ಮಾಡಿದ ಪ್ರಯತ್ನಗಳು ಉಲ್ಲೇಖನೀಯ. ಈ ವಿಷಯದಲ್ಲಿ "ಬೆಂಗಾಲ್ ಟೆಂಪರೆನ್ಸ್ ಸೊಸೈಟಿ"ಯ ಅತ್ಯಂತ ಆಸಕ್ತಿ ಸಮಾಜ ಸುಧಾರಕರಾದ ಪಿಯರಿಚರಣ ಸರಕಾರ ಅವರೊಂದಿಗೆ ವಿದ್ಯಾಸಾಗರರು ಸಕಲ ರೀತಿಯಿಂದ ನೆರವಾದರು.

ಸಮಾಜ ಸುಧಾರಣೆ ವಿದ್ಯಾಸಾಗರರ ಜೀವನದ ಉಸಿರಾಗಿತ್ತು. ಅವರ ಚರಿತ್ರೆಕಾರರಾದ ಚಂಡಿಚರಣ ಬಂದೋಪಾಧ್ಯಾಯ ಅವರು, ವಿದ್ಯಾಸಾಗರರು, ಸಮಾಜದ ಬಗ್ಗೆ ಕಳಕಳಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯೂ ಕಡ್ಡಾಯವಾಗಿ ಕೈಕೊಳ್ಳಬೇಕೆಂದ 10 ಅಂಶಗಳ ಪ್ರಮಾಣ ವಚನ ತಯಾರಿಸಿದ್ದರೆಂಬುದನ್ನು ತಿಳಿಸಿದ್ದಾರೆ. ಈ ಪ್ರಮಾಣ ವಚನ, ಸಮಾಜ ವ್ಯಕ್ತಿಗಳು ಎಲ್ಲ ದುರಾಚಾರಗಳಿಂದ ದೂರವಿರಬೇಕೆಂಬುದರ ಬಗ್ಗೆ ವಿದ್ಯಾಸಾಗರರು ಎಷ್ಟು ಕಳಕಳಿಯುಳ್ಳವರಾಗಿದ್ದರೆಂಬುದಕ್ಕೆ ಸಾಕ್ಷಿಯಾಗಿದೆ. ಈ ಪ್ರಮಾಣವಚನಕ್ಕೆ ಸಹಿ ಮಾಡುವ ವ್ಯಕ್ತಿ, ಧರ್ಮದ ಹೆಸರಿನಲ್ಲಿ ಆಣೆ ಮಾಡಿ, ಕೆಳಗಿನ ಕರಾರುಗಳನ್ನು ಪಾಲಿಸಬೇಕು ಎಂದು ವಿಧಿಸಲಾಗಿತ್ತು:

(1) ತನ್ನ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ನೀಡಬೇಕು.
(2) ಹೆಣ್ಣುಮಕ್ಕಳು 11 ವರ್ಷದವರಾಗುವವರೆಗೆ ಅವರ ವಿವಾಹ ಮಾಡಕೂಡದು.
(3) ಕುಲೀನತೆಯನ್ನು ನೋಡದೆ ಸ್ವಜಾತಿಯಲ್ಲಿ ವರ ನೋಡಿ ಮಗಳನ್ನು ಮದುವೆ ಮಾಡಿಕೊಡಬೇಕು.
(4) ಮಗಳು ವಿಧವೆಯಾದರೆ ಅವಳ ಒಪ್ಪಿಗೆ ಪಡೆದು ಅವಳ ಪುನರ್ವಿವಾಹಕ್ಕೆ ಎಡೆಮಾಡಿಕೊಡಬೇಕು.
(5) ಗಂಡುಮಕ್ಕಳ ವಿವಾಹವನ್ನು ಅವರು 18 ವರ್ಷದವರಾಗುವವರೆಗೆ ಮಾಡಕೂಡದು.
(6) ಒಬ್ಬ ಹೆಂಡತಿ ಜೀವಂತವಿರುವಾಗ ಇನ್ನೊಬ್ಬಳನ್ನು ಮದುವೆಯಾಗಕೂಡದು.
(7) ಮಗಳನ್ನು ಹೆಂಡತಿಯಿರುವ ವ್ಯಕ್ತಿಗೆ ಮದುವೆ ಮಾಡಕೂಡದು.
(8) ಈ ಪ್ರಮಾಣವಚನಕ್ಕೆ ವ್ಯತಿರಿಕ್ತವಾದ ಯಾವ ಕಾರ್ಯವನ್ನೂ ಮಾಡಕೂಡದು.
(9) ತನ್ನ ದುಡಿಮೆಯ 50 ರಲ್ಲಿ ಒಂದು ಭಾಗವನ್ನು ಇದಕ್ಕಾಗಿ ನೇಮಿಸಿದ ಖಜಾಂಚಿಗೆ ಒಪ್ಪಿಸತಕ್ಕದ್ದು.
(10) ಒಮ್ಮೆ ಸಹಿ ಮಾಡಿದ ನಂತರ ಪ್ರಮಾಣವಚನದಿಂದ ಹಿಂದೆಗೆಯಬಾರದು.

ಈ ಪ್ರಮಾಣವಚನಕ್ಕೆ ಕೇವಲ 125 ಜನರ ಅಂಕಿತ ದೊರಕಿಸಲು ಮಾತ್ರ ವಿದ್ಯಾಸಾಗರರಿಗೆ ಸಾಧ್ಯವಾಯಿತು.

# 6. ಉಳಿದ ರಂಗಗಳಲ್ಲಿ

ಈಗ ಮತ್ತೆ ನಾವು ಅವರ ಸರಕಾರಿ ನೌಕರಿಯ ಗತಿಯನ್ನು ನಿರೀಕ್ಷಿಸಲು ಮರಳುತ್ತಿದ್ದೇವೆ. ಅದೇನೂ ಅಷ್ಟೊಂದು ಸೌಖ್ಯದಾಯಕವಾಗಿರಲಿಲ್ಲ. ಸರಕಾರಿ ಸಂಸ್ಕೃತ ಕಾಲೇಜಿನ ಕಾರ್ಯದರ್ಶಿಯೊಡನೆ ತಲೆದೋರಿದ ಭಿನ್ನಾಭಿಪ್ರಾಯಗಳಿಂದಾಗಿ 1847 ರ ಜುಲೈ ತಿಂಗಳಲ್ಲಿ ವಿದ್ಯಾಸಾಗರರು ತಮ್ಮ ಹುದ್ದೆಗೆ ರಾಜೀನಾಮೆಯಿತ್ತ ವಿಷಯ ನಿಮಗೆ ನೆನಪಿರಬಹುದು. ಅವರು ತಮ್ಮ ಮೊದಲ ಸಂಘರ್ಷದಲ್ಲಿ ಸೋಲನ್ನು ಅನುಭವಿಸಿದರು. ಪ್ರಿನ್ಸಿಪಾಲರೆಂದು ಮತ್ತೆ ಕಾಲೇಜ್ ಸೇರಿಕೊಂಡ ನಂತರ ಬೆಲಂಟೈನ್ ಅವರ ವರದಿಯಿಂದ ಮತ್ತೊಮ್ಮೆ ವಿಪರೀತ ಪರಿಸ್ಥಿತಿಯನ್ನು ಅನುಭವಿಸಬೇಕಾಯಿತು. ಆದರೆ ಈ ಸಲ ಸರಕಾರ ವಿದ್ಯಾಸಾಗರರ ಅಭಿಪ್ರಾಯವನ್ನು ಎತ್ತಿ ಹಿಡಿಯಿತು. ಆದರೆ ಸ್ತ್ರೀ ಶಿಕ್ಷಣದ ಪ್ರಸಾರದ ವಿಷಯದಲ್ಲಿ ಸರಕಾರ ಪೂರ್ಣವಾಗಿ ಅವರ ಕೈಬಿಟ್ಟಿತು. ಕೊನೆಗೆ ಅವರಿಗೂ ಸಿವಿಲಿಯನ್ ಅಧಿಕಾರಿಯಾದ ಡಿ.ಪಿ.ಆಯ್. ಗಾರ್ಡನ್ ಯಂಗ್ ಅವರಿಗೂ ತೀವ್ರ ಭಿನ್ನಾಭಿಪ್ರಾಯಗಳು ತಲೆದೋರಿದವು. ಆದರೂ ಡಾ. ಮಾವ್ತ್ ಹ್ಯಾಲಿಡೆ, ಸೆಸಿಲ್ ಬೀಡನ್ ಮುಂತಾದ ಉನ್ನತ ಇಂಗ್ಲಿಷ್ ಅಧಿಕಾರಿಗಳು ವಿದ್ಯಾಸಾಗರರ ಬಗ್ಗೆ ಬಹಳ ಗೌರವ ಭಾವನೆ ಇಟ್ಟುಕೊಂಡಿದ್ದರಲ್ಲದೆ, ಅವರ ಅಭಿಪ್ರಾಯಗಳಿಗೆ ಬೆಂಬಲ ನೀಯುತ್ತಿದ್ದರು. ಇಂಗ್ಲಿಷ್ ಗೃಹಸ್ಥರು ಹಾಗೂ ಭಾರತೀಯರ ನಡುವೆ, ಹಾಗೂ ಮೇಲಿನ ಅಧಿಕಾರಿ ಹಾಗೂ ಅವರ ಕೆಳಗಿನ ನೌಕರರಲ್ಲಿ ಆಗಿನ ಕಾಲದಲ್ಲಿ ಇರುತ್ತಿದ್ದ ಸಂಬಂಧಗಳನ್ನು ನೆನೆದರೆ, ವಿದ್ಯಾಸಾಗರ ಹಾಗೂ ಹ್ಯಾಲಿಡೆಯವರ ನಡುವೆ ಇದ್ದ ಅನ್ಯೋನ್ಯ ಹಾಗೂ ತೀರ ಹತ್ತಿರದ ಸಂಬಂಧ ಬಹಳ ಆಶ್ಚರ್ಯಕರವಾಗಿತ್ತು. ಇಂಥ ಒಳ್ಳೆಯ ಪರಿಕೀಯ ಗೃಹಸ್ಥರ ಪ್ರೋತ್ಸಾಹ ಹಾಗೂ ಸಹಾಯಗಳಿಂದಲೇ ವಿದ್ಯಾಸಾಗರರು ಇಷ್ಟೊಂದು ಶೈಕ್ಷಣಿಕ ಸುಧಾರಣೆಗಳನ್ನು ಮಾಡಲು ಸಾಧ್ಯವಾಯಿತು. ಆದರೆ ಮೊದಲಿನ ಕೌನ್ಸಿಲ್ ಆಫ್ ಎಜ್ಯುಕೇಶನ್‌ದ ಸ್ಥಾನದಲ್ಲಿ ಒಬ್ಬ ಶಿಕ್ಷಣ ಖಾತೆಯ ಮುಖ್ಯಸ್ಥನೆಂದು ಓರ್ವ ಸಿವಿಲಿಯನ್ ಆಫೀಸರನನ್ನು ನೇಮಿಸಿದ ನಂತರ ವಿದ್ಯಾಸಾಗರರಿಗೆ ಅಲ್ಲಿಯ ವಾತಾವರಣ ಉಸಿರು ಕಟ್ಟುವಂತಹದೆನ್ನಿಸಿತು. ಅವರ ಸ್ವತಂತ್ರ ಪ್ರವೃತ್ತಿಗೆ ಅದು ಒಗ್ಗಲಿಲ್ಲ.

ತಮ್ಮ ಘನವಾದ ಉದ್ದೇಶಗಳನ್ನು ಕಾರ್ಯರೂಪದಲ್ಲಿ ತರುವುದಕ್ಕೆ ಸೂಕ್ತವಾದ ವಾತಾವರಣ ಅಲ್ಲಿ ಇರಲಿಲ್ಲ. ಇದಲ್ಲದೇ ಅವರ ಆರೋಗ್ಯವು ಅಷ್ಟು ಸರಿಯಾಗಿರಲಿಲ್ಲ. ಆದರೂ ಅವರು ರಾಜೀನಾಮೆ ಸಲ್ಲಿಸುವುದರ ಬದಲಾಗಿ,

ತಮ್ಮ ಆರೋಗ್ಯ ಸುಧಾರಣೆಗೆಂದು ದೀರ್ಘ ರಜೆ ತೆಗೆದುಕೊಳ್ಳಬಹುದಾಗಿತ್ತು. ಆದರೆ ಇನ್ನೊಂದು ಸಂಗತಿ ಅವರಿಗೆ ತೀವ್ರ ನಿರಾಶೆಯನ್ನುಂಟುಮಾಡಿದಂತೆ ಕಾಣುತ್ತದೆ. ಅದು ದಕ್ಷಿಣ ಬಂಗಾಲದ ಶಾಲೆಗಳ ನಿರೀಕ್ಷಕರಾಗಿ ಲಾಡ್ಜ್ ಎಂಬುವರ ನೇಮಕಾತಿ. ಇದು ವಿದ್ಯಾಸಾಗರರ ಬಗ್ಗೆ ಸರ್ಕಾರ ತೋರಿಸಿದ ಭೇದಭಾವದ ನಿದರ್ಶನವಾಗಿತ್ತು. ಯಾಕೆಂದರೆ ಈ ಜಾಗ ಖಾಲಿ ಬಿದ್ದಾಗ ಈ ಸ್ಥಾನಕ್ಕೆ ಬೇಕಾದ, ಎಲ್ಲ ಶೈಕ್ಷಣಿಕ ಸಮಸ್ಯೆಗಳ ಪರಿಜ್ಞಾನ ಹೊಂದಿದಂಥ ವಿದ್ಯಾಸಾಗರರನ್ನು ನೇಮಿಸಬೇಕಾಗಿತ್ತು. ಆದರೆ ಅವರ ಅರ್ಹತೆಯನ್ನು ಕಡೆಗಣಿಸಲಾಯಿತು. ಆಗ ಲೆಫ್ಟಿನೆಂಟ್ ಗವರ್ನರ್‌ರಾಗಿದ್ದ ಹ್ಯಾಲಿಡೆ ವಿದ್ಯಾಸಾಗರರನ್ನು ಬಹಳಷ್ಟು ಮೆಚ್ಚಿಕೊಂಡವರಾಗಿದ್ದರೂ, ಈ ಸ್ಥಾನಕ್ಕೆ ವಿದ್ಯಾಸಾಗರರಿಗಿದ್ದ ಅರ್ಹತೆಯ ಹಕ್ಕನ್ನು ಕಡೆಗಣಿಸಲು ನಿರ್ಧರಿಸಿದರು. ಯಾವುದೋ ಕಡೆಯ ಒತ್ತಡದಿಂದ ಹೀಗಾಗಿರಬೇಕು. ಇಲ್ಲವೇ ರಂಗದ ಹಿಂದುಗಡೆಯಲ್ಲಿ ಭಾರತೀಯರ ಬಗ್ಗೆ ಬಿಳಿಯರಲ್ಲಿ ಹುದುಗಿದ ದ್ವೇಷ ಇದಕ್ಕೆ ಕಾರಣವಾಗಿದ್ದರೂ ಆಗಿರಬಹುದು. ಅಂತೂ ಈ ಘಟನೆಯಿಂದ ಪರದೇಶದ ಆಳರಸರಾದ ಬ್ರಿಟಿಷರಿಂದ ಭಾರತೀಯರಿಗೆ ನ್ಯಾಯ ದೊರಕೀತೆಂಬ ಆಶೆಗೆ ನಿರಾಶೆಯ ನೀರೆರಚಿದಂತಾಯಿತು. 1857 ರ ಆಗಸ್ಟ್ ತಿಂಗಳಲ್ಲಿ ಅವರು ಡಿ.ಪಿ.ಅಯ್. ಅವರಿಗೆ ಪತ್ರ ಬರೆದು ತಮ್ಮ ಹುದ್ದೆಗೆ ರಾಜೀನಾಮೆ ಕೊಡುವ ಇಚ್ಛೆ ತಿಳಿಯಪಡಿಸಿದರು. ಈ ಪತ್ರದ ಪ್ರತಿಯನ್ನು ಹ್ಯಾಲಿಡೆ ಅವರಿಗೂ ಕಳಿಸಿದರು. ಹ್ಯಾಲಿಡೆ ಅವರು ವಿದ್ಯಾಸಾಗರರು ಇಷ್ಟೊಂದು ತೀಕ್ಷ್ಣವಾದ ಪ್ರತಿಕ್ರಿಯೆ ತೋರಿಸಬಹುದೆಂದು ಬಗೆದಿರಲಿಲ್ಲ. ಅವರು ವಿದ್ಯಾಸಾಗರರಿಗೆ ರಾಜೀನಾಮೆ ಕೊಡಬಾರದೆಂದು ಒತ್ತಾಯ ತಂದರು. ಅವರ ಒತ್ತಾಯಕ್ಕೆ ಮನ್ನಣೆಯಿತ್ತು ವಿದ್ಯಾಸಾಗರರು ಮತ್ತೊಂದು ವರ್ಷ ಕೆಲಸ ಮಾಡಲು ಒಪ್ಪಿಕೊಂಡು 1858 ರ ಆಗಸ್ಟ್‌ನಲ್ಲಿ ತಮ್ಮ ಹುದ್ದೆಗೆ ರಾಜೀನಾಮೆಯಿತ್ತರು. 1858 ರ ಸೆಪ್ಟಂಬರ್ ತಿಂಗಳಲ್ಲಿ ಅವರ ರಾಜೀನಾಮೆ ಸ್ವೀಕರಿಸುವಾಗ ಈ ರೀತಿ ಟಿಪ್ಪಣಿ ದಾಖಲು ಮಾಡಿದರು: "ಪಂಡಿತರು ಈ ರಾಜೀನಾಮೆ ಕೊಡುವ ಮೂಲಕ ಸ್ವಲ್ಪ ಅನುದಾರ ರೀತಿಯಲ್ಲಿ ನಡೆದುಕೊಂಡರೆಂದು ನಮೂದಿಸಲು ನಮಗೆ ವ್ಯಥೆಯಾಗುತ್ತದೆ. ಯಾಕೆಂದರೆ ಅವರ ಅಸಮಾಧಾನಕ್ಕೆ ಯಾವ ನ್ಯಾಯವಾದ ಕಾರಣವಿರಲಿಲ್ಲ. ಆದಾಗ್ಯೂ, ಅವರು ದೇಶೀಯರಿಗೆ ವಿದ್ಯೆ ಕೊಡುವ ಕಾರ್ಯದಲ್ಲಿ ಬಹಳ ದೀರ್ಘ ಕಾಲದವರೆಗೆ ಒಳ್ಳೇ ಉತ್ಸಾಹದಿಂದ ಸೇವೆ ಸಲ್ಲಿಸಿದ ಬಗ್ಗೆ ಮೆಚ್ಚಿಕೆಯನ್ನು ವ್ಯಕ್ತಪಡಿಸುತ್ತೇವೆ." ಶಿಕ್ಷಣಕ್ಕಾಗಿ ವಿದ್ಯಾಸಾಗರರು ತಮ್ಮ ಜೀವನಸರ್ವಸ್ವವನ್ನೆಲ್ಲ ಧಾರೆಯೆರೆದು ಮಾಡಿದ ಸೇವೆಗೆ ಸರ್ಕಾರದ ಕಾಗದ ಪತ್ರಗಳಲ್ಲಿ ಈ ಸಣ್ಣ ಮೆಚ್ಚಿಗೆಯ ಪತ್ರ ಮಾತ್ರ ಅವರಿಗೆ ದೊರೆತ ಪ್ರತಿಫಲ. ಅವರಿಗೆ ಬೇರೆ ಯಾವ ಪ್ರತಿಫಲವೂ ದೊರೆಯಲಿಲ್ಲ. ಅವರ ಒಟ್ಟು ಸೇವೆಯ ಅವಧಿ ಕೇವಲ ಹತ್ತು ವರ್ಷಗಳಾಗಿದ್ದರಿಂದ ಅವರಿಗೆ ನಿವೃತ್ತಿ ವೇತನ ಕೂಡ ದೊರೆಯಲಿಲ್ಲ.

ಅವರು ವಿಧವಾ ಪುನರ್ವಿವಾಹದ ಆಂದೋಲನದಲ್ಲಿ ಪೂರ್ತಿ ಧುಮುಕಿ ಕಾರ್ಯೋನ್ಮುಖರಾಗಿದ್ದಾಗ ಇವೆಲ್ಲ ಸಂಭವಿಸಿದವು. ಆಗ ಅವರಿಗೆ ಹಣದ ಅವಶ್ಯಕತೆ ಬಹಳಷ್ಟು ಇತ್ತು. ಅವರು ಪ್ರಕಟಿಸಿದ ಪುಸ್ತಕಗಳಿಂದ ಸಾಕಷ್ಟು ಹಣ ಬರುತ್ತಿತ್ತೇನೋ ನಿಜ. ಆದರೆ ಅವರ ಉದಾರ ಮನಸ್ಸಿನ ದಾನದ ಮೊತ್ತವು ದೊಡ್ಡದಾಗಿರುತ್ತಿತ್ತು. ಬಕ್‌ಲ್ಯಾಂಡರ ಪ್ರಕಾರ ಆಗಿನ ದಿನಗಳಲ್ಲಿ ಅವರ ಪ್ರತಿ ತಿಂಗಳ ದಾನದ ಮೊತ್ತ ರೂ. 1,500 ರಷ್ಟು ಆಗುತ್ತಿತ್ತು. ಇದಲ್ಲದೆ ವಿಧವಾ ಪುನರ್ವಿವಾಹಗಳು ಅವರನ್ನು ಬಹಳ ಖರ್ಚಿಗೀಡುಮಾಡುತ್ತಿದ್ದವು. ತಮ್ಮ ನೌಕರಿಯಲ್ಲಿ ಪ್ರಿನ್ಸಿಪಾಲ ಹುದ್ದೆಗೆ 300 ರೂಪಾಯಿ, ಸ್ಪೆಶಲ್ ಇನ್ಸ್‌ಪೆಕ್ಟರ್ ಆಫ್ ಸ್ಕೂಲ್ಸ್ ಹುದ್ದೆಗೆ 200 ರೂಪಾಯಿ, ಒಟ್ಟು 500 ರೂಪಾಯಿ ವೇತನ ದೊರೆಯುತ್ತಿತ್ತು. ಆಗಿನ ದಿನಗಳಲ್ಲಿ ಇದು ದೊಡ್ಡ ಮೊತ್ತದ ವೇತನವಾಗಿದ್ದರೂ ಅವರು ಈ ಹುದ್ದೆಗೆ ರಾಜೀನಾಮೆಯಿತ್ತರು. ಇಂಥ ಹುದ್ದೆಯನ್ನು ಬಿಸಾಡಿ ಒಗೆಯುವ ಅವರ ನಿರ್ಧಾರ, ಅವರ ಛಲ ಹಾಗೂ ಆತ್ಮಗೌರವಕ್ಕೆ ಸಾಕ್ಷಿ.

ವಿದ್ಯಾಸಾಗರರು ಒಬ್ಬ ಸರಕಾರಿ ನೌಕರನ ವೇಷದಲ್ಲಿದ್ದ ಧರ್ಮಯೋಧರಾಗಿದ್ದರು. ತಮ್ಮ ಜೀವನದ ಧ್ಯೇಯ ಆದರ್ಶಗಳಿಗೆ ವಾತಾವರಣ ಪೋಷಕವಾಗಿಲ್ಲವೆಂದೆನಿಸಿದಾಗ, ಅವರು ಉಕ್ಕಿನ ಕಟ್ಟುಗಳಿಂದ ಹೊರಗುಳಿಯುವುದರಿಂದ, ಈ ಆದರ್ಶಗಳನ್ನು ಚೆನ್ನಾಗಿ ಕಾರ್ಯರೂಪದಲ್ಲಿ ತರಲು ಯತ್ನಿಸುವುದು ಸಾಧ್ಯವಿಲ್ಲವೆಂದೆನಿಸಿದಾಗ, ಸರಕಾರಿ ನೌಕರಿ ತ್ಯಜಿಸುವ ನಿರ್ಧಾರದಿಂದ ಅವರನ್ನು ವಿಚಲಿತಗೊಳಿಸುವುದು ಯಾರಿಂದಲೂ ಸಾಧ್ಯವಿರಲಿಲ್ಲ. ಅವರು ಹಣವನ್ನು ಬಯಸುತ್ತಿದ್ದರೇನೋ ನಿಜ. ಆದರೆ ಅದನ್ನು ಅವರು ಎಂದೂ ತಮ್ಮ ಆತ್ಮಗೌರವಕ್ಕಿಂತ ಹೆಚ್ಚಿನದೆಂದು ಬಗೆಯಲಿಲ್ಲ. ವ್ಯಕ್ತಿ ಸ್ವಾತಂತ್ರ್ಯ ಹಾಗೂ ಜೀವನದ ಘನವಾದ ಧ್ಯೇಯ ಆದರ್ಶಗಳು ಅವರಿಗೆ ಯಾವಾಗಲೂ ಹೆಚ್ಚಿನ ಮಹತ್ವದ ಸಂಗತಿಗಳಾಗಿದ್ದವು. ಸ್ವಚ್ಛ ಬಿಳಿ ಧೋತರ ಉಟ್ಟು, ಛಾದರ ಹೊದ್ದುಕೊಂಡು, ಚಪ್ಪಲಿ ಮೆಟ್ಟಿಕೊಂಡು ಸರಕಾರಿ ಆಫೀಸಿಗೆ ಹೋಗುವಾಗ ಮತ್ತು ಹೊರಗೆ ಬರುವಾಗ ಎದೆ ಸೆಟೆಸಿಕೊಂಡು, ತಲೆ ಎತ್ತಿಕೊಂಡೇ, ಓಡಾಡುತ್ತಿದ್ದ ಈ ಸರಳ ಹಾಗೂ ಸಾದಾ ವೇಷದ ಪಂಡಿತ, ಉಕ್ಕಿನಿಂದ ಮಾಡಿದಂಥ ವ್ಯಕ್ತಿಯಾಗಿದ್ದರು.

ಸಾಮಾಜಿಕ ಸುಧಾರಣೆಗಾಗಿ ಸದಾ ಬೆಳೆಯುತ್ತಿದ್ದ ಖರ್ಚು, ದಾನ ಧರ್ಮಾದಿಗಳಿಗೆ ಬೇಕಾಗುವ ಹಣ, ಇವುಗಳಿಂದ ಅವರಿಗೆ ತೀವ್ರ ಹಣದ ಅಡಚಣೆಯಾಗತೊಡಗಿತು. ಅದಕ್ಕಾಗಿ ಅವರು ಪ್ರಸಿಡೆನ್ಸಿ ಕಾಲೇಜಿನಲ್ಲಿ ಸಂಸ್ಕೃತ ಪ್ರೊಫೆಸರ್ ಆಗಿ ಕೆಲಸ ಮಾಡುವ ಅಪೇಕ್ಷೆ ಪಟ್ಟು, ಆ ಬಗ್ಗೆ ಲೆಫ್ಟಿನಂಟ್ ಗವರ್ನರ್ ಆದ ಸೆಸಿಲ್ ಬೀಡನ್ ಅವರಿಗೆ ಬರೆದರು. ಆಗಲೂ ಕೂಡಾ ಅವರು ತಮ್ಮ ಆತ್ಮಗೌರವ ಬಿಟ್ಟುಕೊಡಲಿಲ್ಲ. ಯುರೋಪಿಯನ್ ಪ್ರೊಫೆಸರರಿಗೆ ಕೊಡುವಷ್ಟೇ ತಮಗೂ ಕೊಟ್ಟರೆ ಮಾತ್ರ ಆ ಹುದ್ದೆ ಸ್ವೀಕರಿಸುವುದಾಗಿ ಕರಾರು ಹಾಕಿದರು. ವಿದ್ಯಾಸಾಗರರ

ಬಗ್ಗೆ ಎಷ್ಟೋ ಗೌರವ ಹೊಂದಿದವರಾಗಿದ್ದರೂ, ಸರ್ ಬೀಡನ್ ಅವರಿಗೆ ಈ ಕರಾರು ಒಪ್ಪಿಗೆಯಾಗಲಿಲ್ಲ. ಹೀಗಾಗಿ ಈ ವಿಷಯ ಅಲ್ಲಿಗೇ ನಿಂತುಹೋಯಿತು.

ಹೀಗೆ ಅವರ ಸ್ಮರಣೀಯವಾದ ಒಂದು ಅಧ್ಯಾಯ ಕೊನೆಗೊಂಡಿತು. ಬ್ರಿಟಿಷ್ ಆಫೀಸರರು, ವಿದ್ಯಾಸಾಗರರ ವಿದ್ವತ್ತು, ಪ್ರಾಮಾಣಿಕತೆ, ಸತ್ಯಸಂಧತೆ ಹಾಗೂ ವಿಚಾರ ಸ್ವಾತಂತ್ರ್ಯಗಳ ಬಗ್ಗೆ ಅತ್ಯಂತ ಗೌರವ ಹೊಂದಿದ್ದರೆಂಬುದನ್ನು ನಾವು ಸರಕಾರಿ ದಾಖಲೆಗಳಿಂದ ಕಂಡುಕೊಳ್ಳಬಹುದು. ಸರಕಾರಿ ನೌಕರರ ಉಕ್ಕಿನ ಚೌಕಟ್ಟಿನಲ್ಲಿ ಬಂಧಿತರಾಗಿ, ಅದರ ಸೀಮಿತ ಕ್ಷಿತಿಜದಲ್ಲಿ ಕೈಕಾಲು ಕಟ್ಟಿಸಿಕೊಂಡು ಹೇಗಾದರೂ ಜೀವನ ಸಾಗಿಸುವುದು, ಸ್ವತಂತ್ರ ಪ್ರವೃತ್ತಿಯ ವಿದ್ಯಾಸಾಗರರಿಗೆ ಸಾಧ್ಯವಿರಲಿಲ್ಲ. ಇದಲ್ಲದೆ ಅವರು ಸಾಧಿಸಬೇಕಾದ ಆದರ್ಶಗಳು ಅತ್ಯಂತ ಉದಾತ್ತವಾಗಿದ್ದವು. ಸರಕಾರಿ ಸೇವೆಯಲ್ಲಿ, ಇರುವವರೆಗೆ ವಿಶ್ರಾಂತಿಯಿಲ್ಲದೆ ದುಡಿದು, ಶಿಕ್ಷಣಕ್ಕೆ ಹೊಸ ಹಾದಿ ಹಾಕಿಕೊಡಲು ಹಾಗೂ ಅದರ ಬೆಳವಣಿಗೆಗೆ ಒಂದು ಭದ್ರ ತಳಹದಿ ಹಾಕಲು ಅವರು ಯತ್ನಿಸಿದರು. ಕಳೆದ ಶತಮಾನದ ಮಧ್ಯಭಾಗದಲ್ಲಿ ಶಿಕ್ಷಣ ಮಾಧ್ಯಮದ ಬಗ್ಗೆ ಬಹಳಷ್ಟು ಗೊಂದಲಮಯ ವಾತಾವರಣವಿದ್ದಿತು. ಎಲ್ಲಕ್ಕಿಂತ ಅತಿ ವಿಪಂಚನೆಯ ಸಂಗತಿಯೆಂದರೆ ಶಿಕ್ಷಣ ಕ್ಷೇತ್ರದಲ್ಲಿ ಕಾರ್ಯಮಾಡುವವರಲ್ಲಿ ಶಿಕ್ಷಣ ತಜ್ಞರ ಕೊರತೆಯಿದ್ದಿತು. ಅಧಿಕಾರಿಗಳೇ ಎಲ್ಲ ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು. ಶೈಕ್ಷಣಿಕ ನೀತಿಗಳನ್ನು ರೂಪಿಸುವಲ್ಲಿ ಭಾರತೀಯರ ಅಭಿಪ್ರಾಯಕ್ಕೆ ಅವಕಾಶವಿರಲಿಲ್ಲ. ಇಂಥ ಗೊಂದಲಮಯ ವಾತಾವರಣದಲ್ಲಿ ವಿದ್ಯಾಸಾಗರರು ತಮ್ಮ ಧ್ವನಿ ಕೇಳುವಂತೆ ಮಾಡಿದ್ದರು. ಅವರು ಸರಕಾರಿ ನೌಕರಿಯಿಂದ ಹೊರ ಬಂದರೂ ಸರ್ಕಾರದ ಸಂಪರ್ಕದಿಂದ ಹೊರಗಾಗಿರಲಿಲ್ಲ. ಸರಕಾರ ಅನೇಕ ಸಮಾಜಿಕ ಹಾಗೂ ಶೈಕ್ಷಣಿಕ ಸಮಸ್ಯೆಗಳ ಬಗ್ಗೆ ಅವರ ಸಲಹೆ ಸೂಚನೆಗಳನ್ನು ಕೇಳುತ್ತಲೇ ಇದ್ದಿತು. ಸಂಸ್ಕೃತ ಕಾಲೇಜನ್ನು ಬಂದು ಮಾಡಿ ಅದರಿಂದ ಉಳಿತಾಯವಾದ ಹಣವನ್ನು ಎಲ್ಲ ಶಾಲೆ ಕಾಲೇಜುಗಳಲ್ಲಿ ಸಂಸ್ಕೃತ ಕಲಿಸುವುದಕ್ಕೆ ವಿನಿಯೋಗಿಸಬೇಕೆಂಬ ಸೂಚನೆ ಸರ್ಕಾರದ ಪರಿಶೀಲನೆಯಲ್ಲಿದ್ದಿತು. ವಿದ್ಯಾಸಾಗರರು ಈ ವಿಚಾರವನ್ನು ಕಟುವಾಗಿ ಟೀಕಿಸಿದರು. ಸಾಮಾನ್ಯ ಜನತೆಯಲ್ಲಿ ವಿದ್ಯಾಪ್ರಸಾರದ ಬಗ್ಗೆ ವಿದ್ಯಾಸಾಗರರ ಸಲಹೆಗಳನ್ನು ಕೇಳಲಾಗುತ್ತಿತ್ತು.

ವಿದ್ಯಾಸಾಗರರು ರಾಜೀನಾಮೆ ನೀಡುವ ಸ್ವಲ್ಪ ಮುಂಚೆ ಸಣ್ಣ ವಯಸ್ಸಿನ ಅರಸು ಮಕ್ಕಳು ಹಾಗೂ ಜಮೀನುದಾರರ ಮಕ್ಕಳಿಗೆ ಶಿಕ್ಷಣ ಕೊಡುವುದಕ್ಕಾಗಿ ವಾರ್ಡ್ಸ್ ಇನ್ಸ್‌ಟಿಟ್ಯೂಟ್ ಎಂಬ ಸಂಸ್ಥೆಯನ್ನು ಸರಕಾರ ಆರಂಭಿಸಿತ್ತು. 1863 ರಲ್ಲಿ ವಿದ್ಯಾಸಾಗರರನ್ನು ಆ ಸಂಸ್ಥೆಗೆ 'ವಿಸಿಟರ್' ಎಂದು ನೇಮಿಸಲಾಯಿತು. ಸಂಸ್ಥೆಯಲ್ಲಿ ಕೊಡಬೇಕಾದ ವಿದ್ಯೆಯ ಬಗ್ಗೆ ವಿದ್ಯಾಸಾಗರರು ಅನೇಕ ಬದಲಾವಣೆಗಳನ್ನು ಸೂಚಿಸಿದರು. ತಮ್ಮ ವರದಿಯಲ್ಲಿ ವಿದ್ಯಾಸಾಗರರು ಯಾವಾಗಲೂ ಪ್ರತಿಪಾದಿಸುತ್ತಿದ್ದ

ಒಂದು ವಿಚಾರ ದಾಖಲೆಯಲ್ಲಿ ಲಭ್ಯವಿದೆ. ಅದೆಂದರೆ ವಿದ್ಯಾರ್ಥಿಗಳಿಗೆ ಎಂದೂ ದೈಹಿಕ ಶಿಕ್ಷೆ ವಿಧಿಸಬಾರದೆಂಬ ಅವರ ಖಚಿತ ಅಭಿಪ್ರಾಯ.

1869 ರಲ್ಲಿ ಹಿಂದೂ ಉಯಿಲು ಮಸೂದೆಯ ಬಗ್ಗೆ ಅಭಿಪ್ರಾಯ ಕೇಳಿದಾಗ ಅವರು ಹಿಂದೂ ಧರ್ಮಶಾಸ್ತ್ರಗಳನ್ವಯ ಹೇಳಲಾದ ಉತ್ತರಾಧಿಕಾರದ ಹಕ್ಕುಗಳನ್ನೇ ಪ್ರತಿಪಾದಿಸಿದರು. ವಿವಾಹಕ್ಕೆ ಒಪ್ಪಿಗೆಯ ವಯಸ್ಸಿನ ಮಸೂದೆಯ ಬಗ್ಗೆ ಸರಕಾರ ಅವರ ಅಭಿಪ್ರಾಯ ಕೇಳಿದ ಬಗ್ಗೆ ಆಗಲೇ ಉಲ್ಲೇಖಿಸಲಾಗಿದೆ.

ವಿದ್ಯಾಸಾಗರರು ನಿವೃತ್ತಿ ನಂತರ ಮಾಡಿದ ಮಹತ್ಕಾರ್ಯಗಳಲ್ಲಿ ಒಂದು ಮಹತ್ವದ ಕಾರ್ಯವೆಂದರೆ ಹಿಂದು ಮನೆತನಗಳ ವರ್ಷಾಸನ ನಿಧಿಯ ಸ್ಥಾಪನೆ. ಜೀವನ ವಿಮೆ, ಅಥವಾ ಮನೆತನಕ್ಕೆ ಕಷ್ಟ ಕಾಲದಲ್ಲಿ ಉಪಯೋಗವಾಗುವ ಉಳಿದ ಯಾವುದೇ ಯೋಜನೆಗಳಿಲ್ಲದ ಕಾಲದಲ್ಲಿ ಇದೊಂದು ಅಗ್ರಗಾಮಿ ಯೋಜನೆಯಾಗಿದ್ದಿತು. ಮಧ್ಯಮ ವರ್ಗದ ಮನೆತನಗಳಿಗೆ ಆರ್ಥಿಕವಾಗಿ ಇದು ಬಹಳ ಉಪಯುಕ್ತವಾದ ಯೋಜನೆಯಾಗಿತ್ತು. ವಿದ್ಯಾಸಾಗರರು ಕೇವಲ ಆದರ್ಶಗಳ ಕನಸುಗಾರರು ಮಾತ್ರ ಆಗಿರಲಿಲ್ಲ. ಆರ್ಥಿಕ ವ್ಯವಹಾರ ಜ್ಞಾನವುಳ್ಳ ವಾಸ್ತವವಾದಿಯಾಗಿದ್ದರು ಎಂಬುದನ್ನು ಇದು ತೋರಿಸಿಕೊಟ್ಟಿತು. ಮಧ್ಯಮ ವರ್ಗದ ಕುಟುಂಬದಲ್ಲಿ ಜನಿಸಿದ ವಿದ್ಯಾಸಾಗರರು ಆಗಿನ ಸಮಾಜ ವ್ಯವಸ್ಥೆಯ ಅವಿಭಕ್ತ ಕುಟುಂಬದಲ್ಲಿ, ದುಡಿಯುವ ಗಂಡಸು ತೀರಿಕೊಂಡಾಗ ಅವನನ್ನು ಅವಲಂಬಿಸಿದ ಮನೆತನದ ಸದಸ್ಯರೆಲ್ಲ ಎಂಥ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಬೇಕಾಗುತ್ತಿತ್ತೆಂಬುದನ್ನು ಅರಿತವರಾಗಿದ್ದರು. ಇಂಥ ಪರಿಸ್ಥಿತಿಯಲ್ಲಿ ವಿಧವೆಯಾದವಳು ಸಾಮಜಿಕ ಅಡೆತಡೆ ಹಾಗೂ ಆರ್ಥಿಕ ಅಸಹಾಯಕತೆಯ ತುಳಿತದಲ್ಲಿ ಎಂಥ ತೀವ್ರ ಸಂಕಷ್ಟಗಳನ್ನು ಅನುಭವಿಸಬೇಕಾಗುತ್ತಿತ್ತು ಎಂಬುದನ್ನು ಅವರು ಅರಿತಿದ್ದರು. ಅದಕ್ಕೆಂತಲೇ ಒಬ್ಬ ವ್ಯಕ್ತಿ ಈ ನಿಧಿಗೆ ಪ್ರತಿ ತಿಂಗಳ ನಿರ್ದಿಷ್ಟ ಹಣವನ್ನು ತುಂಬುತ್ತ ಹೋದರೆ, ಅವನು ತೀರಿ ಹೋದಾಗ ಅವನ ಮನೆತನದವರಿಗೆ ಒಂದು ಕನಿಷ್ಠ ಆರ್ಥಿಕ ಭದ್ರತೆ ನೀಡುವ ಈ ಯೋಜನೆಯನ್ನು ವಿದ್ಯಾಸಾಗರರು ಮಾಡಿದರು.

ಅವರ ನಿವೃತ್ತಿ ಜೀವನದ ಇನ್ನೊಂದು ಸಾಧನೆಯೆಂದರೆ, ಮೆಟ್ರೋಪೊಲಿಟನ್ ಇನ್ಸ್ಟಿಟ್ಯೂಟಿನ ಸ್ಥಾಪನೆ. ಮಧ್ಯಮ ವರ್ಗದ ಮನೆತನದ ವಿದ್ಯಾರ್ಥಿಗಳಿಗೆ ಸ್ವಲ್ಪ ವೆಚ್ಚದಲ್ಲಿ ಇಂಗ್ಲಿಷ್ ಅಭ್ಯಾಸದ ಅನುಕೂಲತೆ ಮಾಡಿಕೊಡುವುದಕ್ಕಾಗಿ ಕಲಕತ್ತೆಯ ಕೆಲವು ನಾಗರಿಕರು ಸೇರಿ ಈ ಸಂಸ್ಥೆಯನ್ನು ಸ್ಥಾಪಿಸಿದರು. ಇದನ್ನು ಮೊದಲು ಕಲಕತ್ತಾ ಟ್ರೈನಿಂಗ್ ಸ್ಕೂಲ್ ಎಂದು ಕರೆಯುತ್ತಿದ್ದರು. ಆ ಕಾಲದಲ್ಲಿ ಯಾವ ಶೈಕ್ಷಣಿಕ ಕಾರ್ಯವೂ ವಿದ್ಯಾಸಾಗರರ ನೆರವಿಲ್ಲದೆ ನಡೆಯುತ್ತಿರಲಿಲ್ಲ. ಹಾಗೆಯೇ ಈ ಸಂಸ್ಥೆಯೊಂದಿಗೂ ಅವರ ಸಂಪರ್ಕವುಂಟಾಯಿತು. ಕಾರಣಾಂತರದಿಂದ ಮುಂದೆ ಈ ಸಂಸ್ಥೆಯನ್ನು ನಡೆಯಿಸುವ ಪೂರ್ಣ ಜವಾಬ್ದಾರಿ ಅವರ ಮೇಲೆಯೇ

ಬಿದ್ದಿತು. ಈ ಸಂಸ್ಥೆಯ ಹೆಸರನ್ನು ಹಿಂದೂ ಮೆಟ್ರೋಪೋಲಿಟನ್ ಇನ್‌ಸ್ಟಿಟ್ಯೂಶನ್ ಎಂದು ಬದಲಾಯಿಸಲಾಯಿತು. ಈ ಸಂಸ್ಥೆ ವಿದ್ಯಾಸಾಗರರ ನಿವೃತ್ತ ಜೀವನದ ಅತಿ ಆಸಕ್ತಿಯ ಪೋಷಣೆಯ ಸಂಸ್ಥೆಯಾಯಿತು. ಅದನ್ನು ಅವರು ಪಿತೃವಾತ್ಸಲ್ಯದಿಂದ ಪೋಷಿಸಿದರು. 1864 ರಲ್ಲಿ ಈ ಸಂಸ್ಥೆಯನ್ನು ಉನ್ನತ ಶಿಕ್ಷಣ ಕೊಡುವ ಸಂಯೋಜಿತ ಸಂಸ್ಥೆಯೆಂದು ಪರಿಗಣಿಸಲು ಕಲಕತ್ತಾ ವಿಶ್ವವಿದ್ಯಾಲಯಕ್ಕೆ ಅರ್ಜಿ ಸಲ್ಲಿಸಲಾಯಿತು. ಆದರೆ ಆಗ ವಿಶ್ವವಿದ್ಯಾಲಯದ ಆಡಳಿತ ಅಧಿಕಾರದಲ್ಲಿದ್ದ ಯುರೋಪಿಯನ್ನರು ದೇಶೀಯ ಸಂಸ್ಥೆಯೊಂದು ಇಂಗ್ಲಿಷ್ ಅಭ್ಯಾಸ ಕೊಡಲು ಯೋಗ್ಯವಾದ ಸಂಸ್ಥೆಯಾಗಲಾರದೆಂದು ಬಗೆದು, ಈ ಅರ್ಜಿಯನ್ನು ತಿರಸ್ಕರಿಸಿದರು. 1872 ರಲ್ಲಿ ಮೊದಲನೇ ಆರ್ಟ್ಸ್ ಪರೀಕ್ಷೆಯವರೆಗೆ ಕಲಿಸುವ ವರ್ಗಗಳಿಗೆ ಸಂಯೋಜನೆಯ ಅರ್ಜಿಯನ್ನು ವಿದ್ಯಾಸಾಗರರು ಮತ್ತೆ ಸಲ್ಲಿಸಿದರು. ಈ ಸಲ ಅವರ ಅರ್ಜಿಗೆ ಮನ್ನಣೆ ನೀಡಲಾಯಿತು. ಬರಬರುತ್ತ ಮುಂದಿನ ವರ್ಗಗಳಿಗೂ ಮನ್ನಣೆ ದೊರೆಯುತ್ತಹೋಯಿತು. ಮುಂದುವರೆಯುತ್ತಾ ಈ ಸಂಸ್ಥೆ ಒಳ್ಳೇ ಪರೀಕ್ಷಾ ಪರಿಣಾಮಗಳಿಂದ, ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದ ಯುರೋಪಿಯನ್ ಹಾಗೂ ಮಿಶನರಿಗಳಿಗೆ ಮತ್ಸರ ಉಂಟುಮಾಡುವಷ್ಟು ಪ್ರಗತಿಯನ್ನು ಸಾಧಿಸಿತು. ಕೇವಲ ದೇಶೀಯರಿಂದ ನಡೆಯಿಸಲ್ಪಟ್ಟ ಸಂಸ್ಥೆ ಇಂಥ ಒಳ್ಳೇ ಪರೀಕ್ಷೆಯ ಪರಿಣಾಮಗಳನ್ನು ಪಡೆಯಿತೆಂಬುದರ ಬಗ್ಗೆ ಅವರೆಲ್ಲ ಆಶ್ಚರ್ಯಪಡುವಂತಾಯಿತು.

ಮೆಟ್ರೋಪೋಲಿಟನ್ ಇನ್‌ಸ್ಟಿಟ್ಯೂಟಿನ ಬಗೆಗೆ ಇಷ್ಟೊಂದು ದೀರ್ಘವಾಗಿ ಏಕೆ ಪ್ರಸ್ತಾಪಿಸಬೇಕಾಯಿತೆಂದರೆ, ಅದು ವಿದ್ಯಾಸಾಗರರ ಶೈಕ್ಷಣಿಕ ವಿಚಾರಗಳ ಹಾಗೂ ಗುಣವಿಶೇಷಗಳ ಸಂಕೇತವಾದಂಥ ಸಂಸ್ಥೆಯಾಗಿದ್ದಿತು. ಭಾರತೀಯ ಭಾಷೆಗಳ ಹಾಗೂ ಸಂಸ್ಕೃತಿಗೆ ವ್ಯತಿರಿಕ್ತವಾದ ಇಂಗ್ಲಿಷ್ ಅಭ್ಯಾಸದ ಬಗೆಗೆ ವಿದ್ಯಾಸಾಗರರಿಗೆ ಎಷ್ಟೊಂದು ಒಲವಿದ್ದಿತೆಂಬುದಕ್ಕೆ ಅವರ ಈ ಪ್ರೀತಿಯ ಸಂಸ್ಥೆ ಸಾಕ್ಷಿಯಾಗಿದೆ. ಅವರ ಅಭಿಪ್ರಾಯದಲ್ಲಿ ಯಾವುದೇ ದೇಶ ಪ್ರಪಂಚದ ಪ್ರವಾಹದಿಂದ ದೂರ ಉಳಿಯುವ ದಿವಸಗಳು ಕೊನೆಗೊಂಡಿವೆ. ದೇಶದಲ್ಲಿ ಕಂಡುಬರುತ್ತಿದ್ದ ವಿದ್ಯೆಯ ಅಭ್ಯುದಯದ ಆದರ್ಶದ ಪೋಷಣೆಗೆ, ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳೆರಡರಲ್ಲಿಯೂ ಒಳ್ಳೆಯದೆಲ್ಲವನ್ನೂ ಬೆರೆಯಿಸಿ ಸ್ವೀಕರಿಸಬೇಕೆಂಬುದೇ ಆಗಿದ್ದಿತು. ಮುಖ್ಯವಾಗಿ ಮಧ್ಯಮ ವರ್ಗದ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ಅಭ್ಯಾಸದ ಅನುಕೂಲತೆ ಒದಗಿಸುವುದಕ್ಕಾಗಿಯೇ ವಿದ್ಯಾಸಾಗರರು ಈ ಸಂಸ್ಥೆಯನ್ನು ಕಟ್ಟಿ ಬೆಳೆಸಿದರು. ಮಿಶಿನರಿ ಕಾಲೇಜಿನಲ್ಲಿಯಾಗಲಿ, ಹಿಂದೂ ಕಾಲೇಜಿನಲ್ಲಿಯೇ ಆಗಲಿ, ವಿದ್ಯಾರ್ಜನೆ ಮಾಡಿದ ವಿದ್ಯಾರ್ಥಿಗಳು ಇಂಗ್ಲಿಷ್ ಅಭ್ಯಾಸದ ಪ್ರಯೋಜನ ಪಡೆದಿದ್ದರ ಪರಣಾಮವಾಗಿ ಭಾರತೀಯ ರಾಷ್ಟ್ರೀಯ ಆತ್ಮಶ್ರೀಯಿಂದ ದೂರವಾಗುತ್ತಿದ್ದರೆಂಬುದನ್ನು ಅವರು ಕಂಡು ಅರಿತಿದ್ದರು. ವಿದ್ಯಾಸಾಗರ ಮತ್ತು ಕೆಲವು ನಿಕಟ ಭಾರತೀಯ ಮಿತ್ರರಿಂದ ವಿದ್ಯಾದಾನ ನಡೆಯುತ್ತಿದ್ದ ಈ ಸಂಸ್ಥೆಯಲ್ಲಿ

ಇಂಗ್ಲಿಷ್ ಅಭ್ಯಾಸ ಪಡೆಯುತ್ತಿದ್ದ ವಿದ್ಯಾರ್ಥಿಗಳು ಹೀಗೆ ಭಾರತೀಯ ಸಂಸ್ಕೃತಿಯಿಂದ ಭ್ರಷ್ಟರಾಗುವುದನ್ನು ತಡೆಯಲಾಯಿತು. ರವೀಂದ್ರನಾಥ ಟಾಗೋರರು ಹೇಳಿದಂತೆ ರಾಷ್ಟ್ರೀಯ ತಳಹದಿಯ ಮೇಲೆ ಇಂಗ್ಲಿಷ್ ಅಭ್ಯಾಸದ ಪದ್ಧತಿಯನ್ನು ವಿದ್ಯಾಸಾಗರರು ಮೊಟ್ಟಮೊದಲಿಗೆ ಈ ಸಂಸ್ಥೆಯಲ್ಲಿ ಆರಂಭಿಸಿದರು. ಈ ಸಂಸ್ಥೆಯಲ್ಲಿ ಭಾರತೀಯ ಹಾಗೂ ಪಾಶ್ಚಿಮಾತ್ಯ ಆತ್ಮಶ್ರೀಯ ಬೆಸುಗೆಯ ಮುಖಾಂತರ ರಾಷ್ಟ್ರೀಯ ಭಾವನೆ ಹಾಗೂ ರಾಜಕೀಯ ಅರಿವನ್ನುಂಟುಮಾಡುವ ಅವರ ಆದರ್ಶ ಸಫಲವಾಯಿತು. ಸ್ವತಃ ರಾಜಕಾರಣಿಯಾಗಿರದಿದ್ದರೂ ವಿದ್ಯಾಸಾಗರರು ರಾಷ್ಟ್ರೀಯತೆಯ ಪ್ರಚೋದನೆಯ ಕಾರ್ಯದಲ್ಲಿ ನೆರವಾದರು. ಸುರೇಂದ್ರನಾಥ ಬ್ಯಾನರ್ಜಿಯವರು ಸರಕಾರಿ ನೌಕರಿಯಿಂದ ತೆಗೆಯಲ್ಪಟ್ಟು ಅವರು ವಕೀಲಿ ವೃತ್ತಿ ಕೈಕೊಳ್ಳಲು ಪರವಾನಗಿ ಸಿಗದೇ ಇದ್ದಾಗ, ಇಂಗ್ಲಿಷ್ ಪ್ರಾಧ್ಯಾಪಕರೆಂದು ವಿದ್ಯಾಸಾಗರರ ಸಂಸ್ಥೆಯನ್ನು ಸೇರಿ ವಿದ್ಯಾರ್ಥಿಗಳಲ್ಲಿ ಬಹುದೊಡ್ಡ ಪ್ರಮಾಣದ ಜಾಗ್ರತೆಯನ್ನುಂಟುಮಾಡುವುದರಲ್ಲಿ ನೆರವಾದರು. ಅದರಂತೆ ಇನ್ನೂ ಅನೇಕ ವೇಧಾವಿಗಳು ಈ ಸಂಸ್ಥೆಯಲ್ಲಿ ಸೇರಿಕೊಂಡರು. ಹೀಗೆ ಬರಬರುತ್ತ ಈ ಸಂಸ್ಥೆ, ಸುಪ್ತವಾಗಿದ್ದ ರಾಷ್ಟ್ರೀಯತೆಯ ಭಾವನೆಯನ್ನು ತನ್ನ ಬಾಲ್ಯಾವಸ್ಥೆಯಿಂದಲೇ ಪೋಷಿಸಿಕೊಂಡು ಒಂದು ಸಂಸ್ಥೆಯೆಂದು ಖ್ಯಾತಿ ಪಡೆಯಿತು. ರಾಷ್ಟ್ರೀಯತೆಯ ದೊಡ್ಡ ಸ್ಫೂರ್ತಿ ಕೇಂದ್ರವೇ ಇದಾಯಿತು. ಸ್ವಾತಂತ್ರ್ಯ ಆಂದೋಲನದ ಪ್ರಾರಂಭಿಕ ದಿನಗಳಲ್ಲಿ ಯುವಕರಲ್ಲಿ ರಾಷ್ಟ್ರೀಯ ಭಾವನೆಯನ್ನು ಕುದುರಿಸಲು ಮತ್ತು ರಾಷ್ಟ್ರಪ್ರೇಮ ಅಂಕುರಿಸಿ ಅದು ಬೆಳೆಯುವಂತೆ ಪೋಷಿಸಲು ಭಾರತೀಯರಿಗೆ ಎರಡೇ ಎರಡು ಸಾಧನಗಳಿದ್ದವು–ಒಂದನೆಯದು ಪತ್ರಿಕೆಗಳು. ಇನ್ನೊಂದು ವಿದ್ಯಾಸಂಸ್ಥೆಗಳು. ಪತ್ರಿಕಾ ಕ್ಷೇತ್ರದಲ್ಲಿ ವಿದ್ಯಾಸಾಗರರು ಮಾಡಿದ ಕಾರ್ಯದ ಬಗ್ಗೆ ಮುಂದೆ ಪ್ರಸ್ತಾಪ ಮಾಡಲಾಗುತ್ತದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಅವರು ಬಹಳ ಮಹತ್ವಪೂರ್ಣವಾದ ಮಾರ್ಗದರ್ಶನ ಮಾಡಿದರು ಹಾಗೂ ಅರಳುತ್ತಿರುವ ದೇಶಾಭಿಮಾನವನ್ನು ಕುದುರಿಸುವಲ್ಲಿ ಅವರ ಮೆಟ್ರೋಪೋಲಿಟನ್ ಇನ್ಸ್ಟಿಟ್ಯೂಟ್ ಒಂದು ಅತ್ಯಂತ ಪ್ರಭಾವಶಾಲಿ ಸಾಧನವಾಗಿ ಪರಿಣಮಿಸಿತು. ಈ ಸಂಸ್ಥೆ ಕಾಲಾಂತರದಲ್ಲಿ ವಿದ್ಯಾಸಾಗರರ ಹೆಸರನ್ನೇ ಹೊತ್ತುಕೊಂಡು ಮುಂದುವರೆದದ್ದು ಯಥಾ ಯೋಗ್ಯವೇ ಆಗಿದೆ.

# 7. ಶಿಲ್ಪಿ, ನಿರ್ಮಾಣಕಾರ

ಆಧುನಿಕ ಬಂಗಾಲಿ ಸಾಹಿತ್ಯದ ಬೆಳವಣಿಗೆಯಲ್ಲಿ ವಿದ್ಯಾಸಾಗರರು ಮಹತ್ವದ ಪಾತ್ರ ವಹಿಸಿದರು. ಬಂಗಾಲಿ ಗದ್ಯವನ್ನು ರೂಪಿಸಿದವರಲ್ಲಿ ಅವರಿಗೆ ಮಹತ್ವದ ಸ್ಥಾನವಿದೆ. ಅವರೊಂದಿಗೆ ಆಧುನಿಕ ಬಂಗಾಲಿ ಭಾಷೆಯ ರಚನಾತ್ಮಕ ಗದ್ಯಶೈಲಿಯ ಹೊಸಯುಗ ಆರಂಭಾವಾಯಿತೆಂದು ಹೇಳಬಹುದು.

ಪ್ರಾಚೀನ ಹಾಗೂ ಮಧ್ಯಕಾಲದ ಬಂಗಾಲಿ ಸಾಹಿತ್ಯದಲ್ಲಿ ಗದ್ಯ ಬಹಳ ಬಡವಾಗಿದ್ದಿತು. ಹಾಗೆ ನೋಡಿದರೆ ಹೇಳಿಕೊಳ್ಳುವಂಥ ಗದ್ಯಸಾಹಿತ್ಯವೇ ಬಂಗಾಲಿಯಲ್ಲಿರಲಿಲ್ಲ. ಬ್ರಿಟಿಷ್ ಆಡಳಿತ ಕಾಲದಲ್ಲಿಯೇ ಬಂಗಾಲಿ ಗದ್ಯಸಾಹಿತ್ಯ ಹೆಚ್ಚಾಗಿ ಬೆಳೆಯಿತು. ಅದೂ ಸಹ ಬಹುಮಟ್ಟಿಗೆ ವಿದೇಶಿಯರ ಪ್ರಚೋದನೆಯಿಂದಲೇ ವಿಲಿಯಮ್ ಕ್ಯಾರೆಯ ಮುಂದಾಳತ್ವದಲ್ಲಿ ಶ್ರೀರಾಮಪುರದ ಕ್ರಿಶ್ಚಿಯನ್ ಮಿಶನರಿಗಳು ಬಂಗಾಲಿ ಸಾಹಿತ್ಯರಚನೆ ಹಾಗೂ ಪುಸ್ತಕ ಪ್ರಕಟಣೆಗೆ ಬಹಳ ಪ್ರೋತ್ಸಾಹ ನೀಡಿದರು. ಆದರೆ ಇದು ಹೆಚ್ಚಾಗಿ ಕ್ರಿಶ್ಚಿಯನ್ ಧರ್ಮಪ್ರಸಾರಕ್ಕಾಗಿಯೇ ಆಗಿತ್ತು. ಅದರ ನಂತರ ಫೋರ್ಟ್ ವಿಲಿಯಮ್ ಕಾಲೇಜಿನಲ್ಲಿ ಹೊಸದಾಗಿ ಸಿವಿಲಿಯನ್ ಹುದ್ದೆ ಸೇರುತ್ತಿದ್ದ ಬ್ರಿಟಿಷ್ ಯುವಕರಿಗೂ ಬಂಗಾಲಿ ಕಲಿಸಲು ವ್ಯವಸ್ಥೆ ಮಾಡಲಾಗುತ್ತಿತ್ತು. ಕ್ಯಾರೆ ಈ ಕಾಲೇಜಿನ ಬಂಗಾಲಿ ಬಾಷೆಯ ವಿಭಾಗದ ಮುಖ್ಯಸ್ಥರಾಗಿದ್ದರು. ಬಂಗಾಲಿ ಭಾಷೆಯ ಪಠ್ಯಪುಸ್ತಕಗಳ ಅಭಾವದಿಂದಾಗಿ ಬಂಗಾಲಿ ಕಲಿಸುವುದಕ್ಕೆ ತೊಂದರೆಯಾಗುತ್ತಿತ್ತು. ಕ್ಯಾರೆಯವರು ತಮ್ಮ ಸುತ್ತ 8 ಜನ ವಿದ್ವಾಂಸರ ಗುಂಪು ಕಟ್ಟಿಕೊಂಡು 15 ವರ್ಷಗಳ ಅವಧಿಯಲ್ಲಿ 13 ಬಂಗಾಲಿ ಗದ್ಯ ಗ್ರಂಥಗಳನ್ನು ಹೊರತಂದರು. ಆದರೆ ನಿಜವಾಗಿಯೂ ಬಂಗಾಲಿ ಗದ್ಯದ ಅಡಿಪಾಯವನ್ನು ಹಾಕಿದವರು ವಿದ್ಯಾಸಾಗರರೇ. ಕೆಲವು ಸಂಸ್ಕೃತ ಗ್ರಂಥಗಳ ಭಾಷಾಂತರಗಳು, ಧರ್ಮದ ವಿಷಯಗಳಿಗೆ ಸಂಬಂಧಿಸಿದ ತರ್ಕಗ್ರಂಥಗಳು ಹಾಗೂ *ಸಂಪರ್ಕ* ಕೌಮುದಿ ಯೆಂಬ ಪತ್ರಿಕೆಯ ಮುಖಾಂತರ ಅವರು ಬಂಗಾಲಿ ಗದ್ಯದ ಭದ್ರ ಬುನಾದಿ ಹಾಕಿದರು. ಈ ವಿಷಯದಲ್ಲಿ ತತ್ವಬೋಧಿನಿ ಪತ್ರಿಕೆಯ ಹಾಗೂ ಅದರ ಚಾಣಾಕ್ಷ ಸಂಪಾದಕರಾಗಿದ್ದ ಅಕ್ಷಯ ಕುಮಾರ ದತ್ತ ಅವರ ಸೇವೆಯನ್ನು ಸ್ಮರಿಸಲೇಬೇಕು. ಇತಿಹಾಸ, ವಿಜ್ಞಾನ, ತತ್ವಜ್ಞಾನ, ಧರ್ಮ, ಇತ್ಯಾದಿ ಕ್ಲಿಷ್ಟ ವಿಷಯಗಳನ್ನು ಮಂಡಿಸಲು ಅವರು ಶಕ್ತಿಯುತವಾದ ಗದ್ಯಶೈಲಿಯನ್ನು ಬೆಳೆಯಿಸಿಕೊಂಡು

ಬಂದರು. ಆದರೆ ಅದು ಜೀವಂತವಾದ ಸ್ಫುರಿಸುವ ಮಾಧ್ಯಮವಾಗಿ ಪರಿವರ್ತನೆ ಹೊಂದಲು ವಿದ್ಯಾಸಾಗರರ ಲೆಕ್ಕಣಿಕೆಯ ಸ್ಪರ್ಶಕ್ಕಾಗಿ ಕಾಯಬೇಕಾಯಿತು.

'ತತ್ವಬೋಧಿನಿ' ಗುಂಪಿಗೆ ಸೇರಿದವರಾದ ವಿದ್ಯಾಸಾಗರರು ಆರಂಭಿಸಿದ ಗದ್ಯಶೈಲಿ ಬಂಗಾಲಿ ಸಾಹಿತ್ಯದಲ್ಲಿ ಒಂದು ಮಹತ್ತರವಾದ ಪುರೋಗಾಮಿ ಹೆಜ್ಜೆಯೇ ಆಗಿದ್ದಿತು.

ವಿದ್ಯಾಸಾಗರರು ಮುಖ್ಯವಾಗಿ ಒಬ್ಬ ಕ್ರಿಯಾಶೀಲ ವ್ಯಕ್ತಿಯಾಗಿದ್ದರು. ಆಗಿನ ಕಾಲದಲ್ಲಿ ಶಿಕ್ಷಣ ತೀರ ಕೀಳು ಸ್ಥಿತಿಯಲ್ಲಿದ್ದಿತು. ಒಳ್ಳೇ ಪಠ್ಯ ಪುಸ್ತಕಗಳು ಲಭ್ಯವಿರಲಿಲ್ಲ. ಬಂಗಾಲಿ ಗದ್ಯ ಕೂಡ ಬಹಳ ಹಿಂದುಳಿದ ಸ್ಥಿತಿಯಲ್ಲಿದ್ದಿತು. ಈ ಕೊರತೆಗಳನ್ನು ನಿವಾರಿಸುವುದು ತಮ್ಮ ಮೊದಲ ಕರ್ತವ್ಯವೆಂದು ವಿದ್ಯಾಸಾಗರರು ನಿರ್ಧರಿಸಿದರು. ಮೊದಲು ಬಂಗಾಲಿ ಭಾಷೆಯನ್ನು ಶ್ರೀಮಂತಗೊಳಿಸಿ ಎಲ್ಲ ತರಹದ ಬರವಣಿಗೆಗೆ ಅದನ್ನು ಅಣಿಗೊಳಿಸುವುದು ಅವಶ್ಯಕವಾಗಿತ್ತು. ದೊಡ್ಡ ಪ್ರಮಾಣದಲ್ಲಿ ಮೂಲ ಬರವಣಿಗೆಯ ಸಾಹಸ ಕೈಕೊಳ್ಳುವುದರ ಬದಲಾಗಿ, ಅವರು ಮೊದಮೊದಲು ಭಾಷಾಂತರ ಹಾಗೂ ಅನುವಾದ ಕಾರ್ಯವನ್ನು ಪ್ರಾರಂಭಿಸಿದರು. ಅವರು ಬರೆದ ಮೂಲ ಗ್ರಂಥಗಳೆಂದರೆ ವಿಧವಾ ಪುನರ್ವಿವಾಹ, ಬಹುಪತ್ನಿತ್ವ, ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಬರೆದ ಪ್ರಬಂಧಗಳು ಹಾಗೂ ಅವರ ಪೂರ್ಣ ಆತ್ಮಕಥೆ. ಇವಲ್ಲದೆ ಅವರ ಅಪೂರ್ಣ ಆತ್ಮಕಥೆ, ಮತ್ತು ಅವರವೇ ಎಂದು ಪರಗಣಿಸಲಾದ ಅವರ ಹೆಸರನ್ನು ಹೊತ್ತಿರದ ಕೆಲವು ಗ್ರಂಥಗಳು. ಅವರ ಬಿಡುವಿಲ್ಲದ ಚಟುವಟಿಕೆಯ ಜೀವನದೊಂದಿಗೆ ತಪಸ್ಸಿನ ವಿದ್ವತ್ಪೂರ್ಣ ಜೀವನವನ್ನು ಹೇಗೆ ಮೇಳವಿಸುತ್ತಿದ್ದರೆಂಬುದು ಅತ್ಯಾಶ್ಚರ್ಯ ಸಂಗತಿ. ಅವರು ಓದಿನಲ್ಲಿ ಏಕಪಾಠಿಯಾಗಿದ್ದರು. ಮತ್ತು ಅವರ ಗ್ರಂಥಾಗಾರದಲ್ಲಿ ಬಂಗಾಲಿ, ಸಂಸ್ಕೃತ, ಇಂಗ್ಲಿಷ್ ಮತ್ತು ಹಿಂದೀ ಭಾಷೆಯಲ್ಲಿ ಆಯ್ದ ಒಳ್ಳೆಯ ಪುಸ್ತಕಗಳಿದ್ದವು. ಬರಹಗಾರಿಕೆಯಲ್ಲಿ ಅವರು ಚತುರರಾಗಿದ್ದರು. ಅವರ ಶೈಲಿ ಉತ್ಕೃಷ್ಟ ಮಟ್ಟದ್ದಾಗಿದ್ದಿತು. ವಿದ್ಯಾ ಸಂಸ್ಥೆಗಳ ಬಳಕೆಗಾಗಿ ಅನೇಕ ಪಠ್ಯಪುಸ್ತಕಗಳನ್ನು ಬರೆಯುವುದು ಅವರಿಗೆ ಅನಿವಾರ್ಯವಾಯಿತು. ಆದರೆ ಅವರ ವ್ಯಕ್ತಿತ್ವದ ಅಂತರಾಳದಲ್ಲಿ ಕಲಾವಿದ ಅಡಗಿಕೊಂಡಿದ್ದ. ಅವರ ಸಾಹಿತ್ಯಕ ಬರವಣಿಗೆಗಳ ಸಂಖ್ಯೆ ಐವತ್ತಕ್ಕೂ ಮೀರಿದೆ. ಅವರ ಪ್ರಕಟಿತ ಪ್ರಥಮ ಕೃತಿ *ಬೇತಾಳ ಪಂಚವಿಂಶತಿ* (1847 ರಲ್ಲಿ ಪ್ರಕಟವಾದದ್ದು) *ಬೇತಾಳ ಪಂಚಶ್ಚಿ* ಎಂಬ ಹಿಂದೀ ಕೃತಿಯ ಮೇಲೆ ಆಧಾರಿತವಾದದ್ದು. ಫೋರ್ಟ್ ವಿಲಿಯಮ್ ಕಾಲೇಜಿನಲ್ಲಿ ಈ ಗ್ರಂಥವು ಪಠ್ಯಪುಸ್ತಕಕ್ಕೆ ಅನರ್ಹವೆಂದು ತಿರಸ್ಕರಿಸಲ್ಪಟ್ಟಿತು. ಇದೇ ಗ್ರಂಥವು ಕೊನಗೆ ಶ್ರೀರಾಮಪುರದ ಮಿಶನ್ನಿನ ಮಾರ್ಶಮನ್ ಅವರಿಂದ ಶ್ಲಾಘಿಸಲ್ಪಟ್ಟು ಅವರ ಶಿಫಾರಸ್ ಪಡೆದು ಕೊನೆಗೆ ಪಠ್ಯಪುಸ್ತಕವೆಂದು ಅಂಗೀಕರಿಸಲ್ಪಟ್ಟಿತು.

ಅವರು ಈ ರೀತಿ ಸಾಹಿತ್ಯದ ಪರೀಕ್ಷೆಯನ್ನು ತೇರ್ಗಡೆ ಹೊಂದಿದಂತಾಯಿತು. ಅವರ ಮುಂದಿನ ಗ್ರಂಥ *ಬಂಗಾಲದ ಇತಿಹಾಸ* (1848) ಮತ್ತು *ಜೀವಚರಿತ* (1849) ಇವೆರಡೂ ಇಂಗ್ಲಿಷ್‌ನಿಂದ ಅನುವಾದಿತ ಗ್ರಂಥಗಳು. *ಬೋಧೋದಯ* (1851) *ಕಥಾಮಾಲಾ* (1856), *ಆಖ್ಯಾನಮಂಜರಿ* (1863) ಸಣ್ಣಮಕ್ಕಳಿಗೆ ಪಠ್ಯ ಪುಸ್ತಕಗಳಾಗಿ ಬಳಕೆಯಾಗಲು ಬರೆದ ಈ ಮೂರು ಗ್ರಂಥಗಳು ಒಂದರ ನಂತರ ಒಂದು ಪ್ರಕಟವಾದವು. ಆದರೆ ಲಕ್ಷಾಂತರ ಬಂಗಾಲಿ ಮಕ್ಕಳಿಗೆ ಅವರು ನೀಡಿದ ಬಹುದೊಡ್ಡ ಕೊಡುಗೆಯೆಂದರೆ *ವರ್ಣಪರಿಚಯ* ಭಾಗ–1 ಮತ್ತು ಭಾಗ–2 ಗ್ರಂಥಗಳು. ಇವು ಬಂಗಾಲದ ಪ್ರಾಥಮಿಕ ಶಿಕ್ಷಣವನ್ನು ಸುಮಾರು 100 ವರ್ಷಗಳವರೆಗೆ ಬೆಳಗಿದವು. *ವರ್ಣಪರಿಚಯ* ಗ್ರಂಥದ ಜನಪ್ರಿಯತೆ ಅಪಾರವಾಗಿತ್ತು. ಅದು ಪ್ರತಿಯೊಂದು ಮನೆಯಲ್ಲಿಯೂ ಕಂಡುಬರುವ ವಸ್ತುವಾಗಿತ್ತು. ಬಂಗಾಲಿ ಭಾಷೆಯ ಮೂಲತತ್ವಗಳನ್ನು, ಪದ್ಧತಿಗನುಸಾರವಾಗಿಯೂ, ಬಹಳ ಸುಲಭವಾಗಿಯೂ ಕಲಿಸುವ ಪದ್ಧತಿಗೆ ಈ ಪುಸ್ತಕ ನಾಂದಿಯಾಯಿತು. ಕಾಳಿದಾಸನ ಅಭಿಜ್ಞಾನ *ಶಾಕುಂತಲವನ್ನು* ಆಧರಿಸಿ ಬರೆದ ಅವರ *ಶಕುಂತಲ* (1854) ಹಾಗೂ ಭವಭೂತಿಯ *ಉತ್ತರರಾಮ ಚರಿತ* ಯನ್ನು ಆಧರಿಸಿ ಬರೆದ *ಸೀತಾರ ವನವಾಸ* (1860) ಇವೆರಡೂ ಕೃತಿಗಳೂ ಮೂಲಕೃತಿಗಳೇನೋ ಎನ್ನುವಷ್ಟು ಲಾಲಿತ್ಯಪೂರ್ಣವಾಗಿವೆ. ಈ ಗ್ರಂಥಗಳಲ್ಲಿ ಅವರ ಅಂತರಾತ್ಮದಲ್ಲಿ ಹುದುಗಿದ ಕಲಾಕಾರನ ಸಾಕ್ಷಾತ್ಕಾರವಾದಂತಿದೆ. ಅವರಲ್ಲಿ ಹುದುಗಿದ್ದ ಸೌಂದರ್ಯ ಪ್ರಜ್ಞೆ ಹಾಗೂ ಕಲಾತ್ಮಕತೆ ಇಲ್ಲಿ ಗರಿ ಬಿಚ್ಚಿ ಪ್ರಚ್ಛನ್ನವಾಗಿ ಆಡಿದಂತಿದೆ. ಸಮಾಜ ಸುಧಾರಣೆಗಳ ಭಿನ್ನಾಭಿಪ್ರಾಯಗಳ ತುರುಸಿನ ತಾಕಲಾಟ, ಧೂಳು ಹಾಗೂ ಗದ್ದಲಗಳಿಂದ ಬಹು ದೂರ ಸರಿದು, ವಿಶಿಷ್ಟ ಶ್ರೇಷ್ಠ ಕಲಾಕೃತಿಗಳ ವೈಭವ ಹಾಗೂ ಸೌಂದರ್ಯಗಳಲ್ಲಿ ಅವರು ತಲ್ಲೀನರಾಗಿರುವುದನ್ನು ಇಲ್ಲಿ ಕಾಣುತ್ತೇವೆ. *ಕುಮಾರ ಸಂಭವ, ಕಾದಂಬರಿ, ಮೇಘದೂತಮ್, ರಘುವಂಶಮ್*, ಮುಂತಾದ ಹಲವಾರು ಸಂಸ್ಕೃತ ಗ್ರಂಥಗಳನ್ನು ಅವರು ಸಂಪಾದಿಸಿದ್ದನ್ನು ನಾವು ಇಲ್ಲಿ ಸ್ಮರಿಸಬಹುದು. ಸಂಸ್ಕೃತ ಕಠಿಣವಾದ ಭಾಷೆ; ಅನೇಕರು ಸಂಸ್ಕೃತ ವ್ಯಾಕರಣವನ್ನು ಸಂಪೂರ್ಣ ತಿಳಿದುಕೊಳ್ಳಲು ಅನೇಕ ವರ್ಷ ತೆಗೆದುಕೊಳ್ಳು ವುದುಂಟು. ಇದು ಈ ಶ್ರೀಮಂತ ಭಾಷೆಯನ್ನು ಅರಿಯಲಿಚ್ಛಿಸಿದ ಆಸಕ್ತಿಗೆ ತಣ್ಣೀರೆರಚಿದಂತಾಗಿತ್ತು. ಸಂಸ್ಕೃತ ಭಾಷೆಯ ವ್ಯಾಕರಣವನ್ನು ಎಲ್ಲರಿಗೂ ತಿಳಿಯುವಂತೆ ಸುಲಭಗೊಳಿಸಲು ಹಾಗೂ ಅದನ್ನೇ ನೆನಪಿಡುವಂತೆ ಮಾಡಲು ವಿದ್ಯಾಸಾಗರರು ಆಸಕ್ತರಾಗಿದ್ದರು. ಅದಕ್ಕಾಗಿಯೇ ಅವರು *ಸಂಸ್ಕೃತ ವ್ಯಾಕರಣಕ್ಕೆ ಪೀಠಿಕೆ* (1851) ಬರೆದರು. ಇದಲ್ಲದೆ *ವ್ಯಾಕರಣ ಕೌಮುದಿ* ಎಂಬ ಗ್ರಂಥದ ನಾಲ್ಕೂ ಭಾಗಗಳನ್ನು 1853, 1854 ಹಾಗೂ 1862 ರಲ್ಲಿ ಪ್ರಕಟಿಸಿದರು. ಶೇಕ್ಸ್‌ಪಿಯರ್‌ನ *ಕಾಮೆಡಿ ಆಫ್ ಎರರ್ಸ್* ಎಂಬ ನಾಟಕವನ್ನು ಆಧರಿಸಿ

ಅವರು ಬರೆದ ವ್ರಾಂತಿ ವಿಲಾಸಿ ಗ್ರಂಥ ಅವರ ವಿಶಾಲ ಸಾಹಿತ್ಯಿಕ ಅಭಿರುಚಿಯ ದ್ಯೋತಕವಾಗಿದೆ.

ಅವರು ವಿಧವಾ ಪುನರ್ವಿವಾಪ ಹಾಗು ಬಹುಪತ್ನಿತ್ವದ ಬಗ್ಗೆ ಬರೆದ ನಾಲ್ಕು ಉದ್ಗ್ರಂಥಗಳು ಹಾಗೂ ಸಂಸ್ಕೃತ ಭಾಷೆ ಹಾಗೂ ಸಾಹಿತ್ಯದ ಮೇಲೆ ಬರೆದ ಗ್ರಂಥ (1853 ರಲ್ಲಿ ಪ್ರಕಟಿತ) ಬಂಗಾಲಿ ಗದ್ಯಸಾಹಿತ್ಯದ ಇತಿಹಾಸದಲ್ಲಿ ಮಹತ್ವದ ಸ್ಥಾನವನ್ನು ಅಲಂಕರಿಸುವ ಗ್ರಂಥಗಳಾಗಿವೆ. ಕೊನೆಯ ಗ್ರಂಥ ಸಂಸ್ಕೃತ ಸಾಹಿತ್ಯದ ಸಂಕ್ಷಿಪ್ತ ರೂಪರೇಷೆಯನ್ನೊಳಗೊಂಡಿದೆ. ವಿದ್ಯಾಸಾಗರರು ತಮ್ಮ ಆತ್ಮಚರಿತ್ರೆಯನ್ನು ಬರೆಯಲು ಆರಂಭಿಸಿದರು. ಆದರೆ ತಮ್ಮ ವಂಶಾವಳಿ, ಹುಟ್ಟು ಹಾಗೂ ಬಾಲ್ಯದ ದಿನಗಳನ್ನು ಚಿತ್ರಿಸುವ ಎರಡು ಅಧ್ಯಾಯಗಳನ್ನು ದಾಟಿ ಮುಂದುವರಿಯುವದಾಗಲಿಲ್ಲ.

ಅನ್ಯರ ಹೆಸರಿನಲ್ಲಿ ಅವರೇ ಹಲವಾರು ಗ್ರಂಥಗಳನ್ನು ಬರೆದರೆಂಬ ಪ್ರತೀತಿಯಿದೆ. ಅವುಗಳೆಂದರೆ *ಅತಿ ಅಲ್ಪ ಹೈಲಾ* (1873), *ಅಬರ್ ಅತಿ ಅಲ್ಪ ಹೈಲಾ* (1875), ಬ್ರಿಜವಿಲಾಸ (1884), ಇತ್ಯಾದಿ. ಈ ಗ್ರಂಥಗಳಲ್ಲಿ ಸಿಗುವ ಅಂತರಿಕ ಅಧಾರಗಳಿಂದ ಹಾಗೂ ಸಮಾಕಾಲೀನರ ಸಾಕ್ಷ್ಯಾಧಾರಗಳ ಪ್ರಕಾರ, ಈ ಗ್ರಂಥಗಳನ್ನು ವಿದ್ಯಾಸಾಗ ರರೇ ಬರೆದರೆಂದು ಹೇಳಲಾಗುತ್ತದೆ. ಅವುಗಳು ವಿಧವಾ ಪುನರ್ವಿವಾಹ ಹಾಗೂ ಬಹುಪತ್ನಿತ್ವದ ಬಗ್ಗೆ ಎದ್ದ ವಾದದ ಬಗ್ಗೆ ಬಂದ ಲೇಖನಗಳಿಗೆ ಉತ್ತರ ರೂಪವಾಗಿ ಬರೆದವುಗಳಾಗಿದ್ದವು. ಅವು ವಿದ್ಯಾಸಾಗರರ ಮೇಲೆ ಸುರಿಸಲಾಗಿದ್ದ ಬೈಗುಳಗಳಿಗೆ ವ್ಯಂಗ್ಯವಾದ ಉತ್ತರಗಳಾಗಿದ್ದವು. ಅವರ ಉಳಿದ ಪ್ರಬಂಧಗಳ ರೀತಿಗೆ ವ್ಯತಿರಿಕ್ತವಾಗಿ ಅವು ಹಾಸ್ಯಶೈಲಿಯಲ್ಲಿ ಬರೆದವುಗಳಾಗಿವೆ. ಅವುಗಳ ಬರವಣಿಗೆ ಕೂಡ ಸುಲಭ ವಾಗಿದೆ. ಅವು ಹಲವು ಸಲ ಆಡುಭಾಷೆಯಲ್ಲಿ ಬರೆದವುಗಳಾಗಿವೆ.

ವಿದ್ಯಾಸಾಗರರು ನಿರ್ವಿವಾದವಾಗಿ ಬಂಗಾಲಿ ಗದ್ಯಸಾಹಿತ್ಯದ ಪ್ರವರ್ತಕರು. ಅವರು ಸಾಹಿತ್ಯ ಕ್ಷೇತ್ರ ಪ್ರವೇಶಿಸಿದ್ದಕ್ಕಿಂತ ಮೊದಲು ಬಂಗಾಲಿ ಗದ್ಯಸಾಹಿತ್ಯ, ಸಂಸ್ಕೃತಮಯವಾಗಿತ್ತಲ್ಲದೆ, ವಿಸ್ತೃತವೂ ಭಾರವಾದ ಶೈಲಿಯದಾಗಿ ಇತ್ತು. ಆಧುನಿಕ ಭಾಷೆಯ ಲಕ್ಷಣಗಳಾದ ಭಾಷೆಯ ಬಂಧುರತೆ, ಸುಲಭಗತಿ ಹಾಗೂ ಲಾಲಿತ್ಯ ಇವುಗಳನ್ನು ಅದು ಪಡೆದಿರಲಿಲ್ಲ. ಅಕ್ಷಯಕುಮಾರರಂಥವರ ತತ್ವಬೋಧಿನಿ ಭಾಷೆಯನ್ನು ಆವರಿಸಿದ ಸಂಸ್ಕೃತದ ಪಾಶಗಳನ್ನು ಕಡಿದು ಒಡೆಯತೊಡಗಿದರು. ಆದರೆ ಬಂಗಾಲಿ ಭಾಷೆಯಲ್ಲಿ ಕಂಡುಬಂದ ಅಡೆತಡೆಗಳು ಹಾಗೂ ಅಸ್ಪಷ್ಟತೆಗಳನ್ನು ತೊಡೆದು ಹಾಕಿ ಅದನ್ನು ಸಾಹಿತ್ಯಕ್ಕೂ ಹಾಗೂ ದಿನನಿತ್ಯದ ವ್ಯವಹಾರದ ಬಳಕೆಗೂ ಸನ್ನದ್ಧಗೊಳಿಸುವ ಕಾರ್ಯವನ್ನು ವಿದ್ಯಾಸಾಗರರೇ ಮಾಡಿ ಪೂರೈಸಿದರು.

ಅವರು ಸಂಸ್ಕೃತ ಭಾಷೆಯನ್ನು ಪೂರ್ತಿಯಾಗಿ ಬಂಗಾಲಿ ಭಾಷೆಯಿಂದ ತೊಡೆದು ಹಾಕಿದರೆಂದು ಭಾವಿಸಬಾರದು. ಅವರ ಅಯ್ದ ಸಂಸ್ಕೃತ ಶಬ್ದಗಳ ಆಯ್ಕೆ ಅವರ ಭಾಷೆಯನ್ನು ವಿಸ್ತೃತ ಅಥವಾ ಅಡೆತಡೆಗಳನ್ನು ಉಂಟುಮಾಡುವ

ಕ್ಲಿಷ್ಟ ಭಾಷೆಯನ್ನಾಗಿ ಮಾಡದೆ, ಅದನ್ನು ಶಕ್ತಿಯುತ ಮತ್ತು ಸ್ಪಷ್ಟ ಭಾಷೆಯನ್ನಾಗಿ ಮಾಡಿ, ಅದಕ್ಕೆ ಲಾಲಿತ್ಯ ಹಾಗೂ ಗಾಂಭೀರ್ಯಗಳನ್ನು ಒದಗಿಸುತ್ತಿತ್ತು. ಒಟ್ಟಾರೆ ಅವರು ಲಲಿತ ವಾಕ್ಸರಣಿ ಅಥವಾ ಸಾಧು ಭಾಷೆಗೆ ಒಂದು ಮಾದರಿ ಹಾಕಿಕೊಟ್ಟರು. ಈ ವಿಷಯವಾಗಿ ಅರ್ಲ್ ಆಫ್ ರೋನಾಲ್ಡರೇ ಹೇಳಿದಂತೆ "ಯಾವ ಸಾಹಸದಲ್ಲಿ ಫೋರ್ಟ್ ವಿಲಿಯಮ್ ಕಾಲೇಜಿನ ಪಂಡಿತರು ವಿಫಲರಾಗಿದ್ದರೋ, ಆ ಸಾಹಸದಲ್ಲಿ ವಿದ್ಯಾಸಾಗರರು ಯಶಸ್ವಿಯಾದರು. ಯಾಕೆಂದರೆ ಅವರು ಬಂಗಾಲಿ ಹಾಗೂ ಸಂಸ್ಕೃತ ಭಾಷೆಗಳ ಶಬ್ದಗಳನ್ನು ಹಾಸುಹೊಕ್ಕಾಗಿ ನೇಯ್ದು, ಅವರು ಆ ಶೈಲಿಗೆ ಗಾಂಭೀರ್ಯ ಹಾಗೂ ಉನ್ನತ ಮಟ್ಟವನ್ನು ದೊರಕಿಸಿಕೊಟ್ಟರು. ಬರವಣಿಗೆ ಹುರುಳಿಲ್ಲದ ಆರ್ಭಟದ ಭಾಷೆಯಾಗಿ ಹದಗೆಡದಂತೆ ಅವರು ನೋಡಿಕೊಂಡರು." ಅವರು ಬಂಗಾಲಿ ಗದ್ಯ ಬರವಣಿಗೆಯಲ್ಲಿ ವಿರಾಮ ಚಿಹ್ನೆಗಳನ್ನು ಹಾಕುವುದನ್ನು ಆರಂಭಿಸಿದರಲ್ಲದೆ ವಾಕ್ಯ ರಚನೆಯನ್ನು ವಿಧಿವತ್ತಾಗುವಂತೆ ಮಾಡಿ ಭಾಷೆಯ ಬಳಕೆ ಸುಲಭವಾಗುವಂತೆ ಮಾಡಿದರು. ಅವರ ಬರವಣಿಗೆಯ ಕಲಾತ್ಮಕತೆಯ ಬಗ್ಗೆ ಹೇಳುವುದಾದರೆ ತೂಕಬದ್ಧವಾದ ವಾಕ್ಯ ರಚನೆ, ತಾಳಲಯಬದ್ಧವಾದ ಶೈಲಿ, ಅವುಗಳಿಗೆ ತಕ್ಕ ಮುಕ್ತಾಯ ಪದಗಳ ಬಳಕೆ ಇವುಗಳಿಂದ ಬಂಗಾಲಿ ಭಾಷೆಗೆ ಮೊಟ್ಟಮೊದಲು ಸೌಂದರ್ಯವನ್ನು ತಂದುಕೊಟ್ಟರೆಂದು ಹೇಳಬಹುದು. ಅವರು ಬಂಗಾಲಿ ಭಾಷೆಗೆ ಲಾಲಿತ್ಯವನ್ನೂ, ಬೆಡಗನ್ನೂ ಒದಗಿಸಿದರು.

ಭಾಷಾ ವಿಜ್ಞಾನದಲ್ಲಿ ವಿದ್ಯಾಸಾಗರರು ಮಾಡಿದ ಸುಧಾರಣೆಗಳಿಂದ ಬಂಗಾಲಿ ಸಾಹಿತ್ಯಕ್ಕೆ ಹೆಚ್ಚಿನ ಶಕ್ತಿ ಹಾಗೂ ಲಾಲಿತ್ಯ ಒದಗಿದ್ದರಿಂದ, ಮುಂದೆ ಬಂಕಿಮ ಚಂದ್ರರಂಥ ಶ್ರೇಷ್ಠ ಶೈಲಿಯ ಕಾದಂಬರಿಕಾರರ ಉದಯ ಸಾಧ್ಯವಾಯಿತು. ವಿದ್ಯಾಸಾಗರರೊಂದಿಗೆ ಎಷ್ಟೇ ಭಿನ್ನಾಭಿಪ್ರಾಯವಿದ್ದರೂ, ಅವರ ಸಾಹಿತ್ಯದ ಗುಣಮಟ್ಟದ ಬಗೆಗೆ ಮೊದಲು ಅವರಿಗೆ ಒಳ್ಳೇ ಅಭಿಪ್ರಾಯವಿರದಿದ್ದರೂ, ಬಂಕಿಮ ಚಂದ್ರರು ಬಂಗಾಲಿ ಗದ್ಯಸಾಹಿತ್ಯ ಕ್ಷೇತ್ರದಲ್ಲಿ ವಿದ್ಯಾಸಾಗರರು ಮಾಡಿದ ಕೃಷಿ ತಮಗೂ ಹಾಗೂ ಸಮಕಾಲೀನ ಬರಹಗಾರರಿಗೂ ಒಂದು ಗಟ್ಟಿಯಾದ ಅಡಿಪಾಯ ಹಾಕಿಕೊಟ್ಟಿತೆಂದು ಒಪ್ಪಿಕೊಂಡಿದ್ದುಂಟು. ವಿದ್ಯಾಸಾಗರರು ಆರಂಭಿಸಿದ ಲಾಲಿತ್ಯಪೂರ್ಣ ಬಂಗಾಲಿ ಬರವಣಿಗೆಯ ಶೈಲಿಯ ವಿರುದ್ಧ ಪ್ರತಿಕ್ರಿಯೆ ಕಂಡು ಬಂದಿತು. ಪೀರಿಯಚಂದ್ರಮಿತ್ರ ಎಂಬುವರು ಟೇಕಚಂದ ಠಾಕೂರ ಎಂಬ ಹೆಸರಿನಲ್ಲಿ ಬರೆದ "ಅಲಬೇದ ಘರೇರ ದುಲಾಲ" ಎಂಬ ಲೇಖನದಲ್ಲಿ ಈ ಪ್ರತಿಕ್ರಿಯೆ ವ್ಯಕ್ತವಾಯಿತು. ಅದರಲ್ಲಿ ವಿದ್ಯಾಸಾಗರರ ಶೈಲಿಯನ್ನೇ ಪೂರ್ತಿಯಾಗಿ ಖಂಡಿಸಿ, ಅದರ ಬದಲಾಗಿ ಆಡುಭಾಷೆಯ ಬರವಣಿಗೆಯನ್ನು ಅದು ಪುರಸ್ಕರಿಸಿತು. ಬಂಕಿಮಚಂದ್ರರು ಇವೆರಡೂ ರೀತಿಗಳ ಮಧ್ಯ ಪದ್ಧತಿಯನ್ನು ಅನುಸರಿಸಿದರಾದರೂ ಬರಬರುತ್ತ ಅವರು ತಮ್ಮ ಬರವಣಿಗೆಯನ್ನು ಆದಷ್ಟು ಸಾಮಾನ್ಯ ಆಡುಭಾಷೆಗೆ ಸಮೀಪ ತರಲು ಯತ್ನಿಸಿದರು. ಬಂಗಾಲಿ ಭಾಷೆಯ ಪರಿವರ್ತನೆಗೆ ವಿದ್ಯಾಸಾಗರರು

ಅವಶ್ಯವಾದ ಚಾಲನೆ ಹಾಗೂ ಶಕ್ತಿಯನ್ನು ಒದಗಿಸಿದರು. ಅವರು ಅವುಗಳನ್ನು ಒದಗಿಸಿರದಿದ್ದರೆ, ಬಂಗಾಲಿ ಭಾಷೆ ಇಷ್ಟು ತೀವ್ರವಾಗಿ ಪ್ರಗತಿ ಹೊಂದುತ್ತಿರಲಿಲ್ಲ. ವಿದ್ಯಾಸಾಗರರು ಮೂಲತಃ ಸುಧಾರಕರಾಗಿದ್ದರು. ಅದು ಶಿಕ್ಷಣ ಕ್ಷೇತ್ರವೇ ಆಗಿರಲಿ, ಸಾಮಾಜಿಕ ಕ್ಷೇತ್ರವೇ ಆಗಿರಲಿ, ಸಾಹಿತ್ಯ ಅಥವಾ ಭಾಷೆಯ ಕ್ಷೇತ್ರವೇ ಆಗಿರಲಿ, ಇವೆಲ್ಲ ಕ್ಷೇತ್ರಗಳಲ್ಲಿಲಯೂ ಅವರ ಪಾತ್ರ ಸುಧಾರಕನದೇ ಆಗಿತ್ತು.

ವಿದ್ಯಾಸಾಗರರು ಪತ್ರಕರ್ತರಾಗಿರಲಿಲ್ಲ. ಪತ್ರಕರ್ತರ ಮೂಲಾಧಾರವಾದ ರಾಜಕಾರಣದಲ್ಲಿಯೂ ಅವರು ಕೈಹಾಕಲಿಲ್ಲ. ಆದರೂ ಪತ್ರಿಕೋದ್ಯಮಕ್ಕೆ ಬಹುಮಟ್ಟಿಗೆ ಚಾಲನೆ ಕೊಟ್ಟ ಕೀರ್ತಿ ಅವರದಾಗಿತ್ತು.

ಬಂಗಾಲಿ ಭಾಷೆಯಲ್ಲಿ ಪತ್ರಿಕೋದ್ಯಮ ತೀವ್ರ ಹೆಜ್ಜೆಯ ಪ್ರಗತಿ ಸಾಧಿಸತೊಡಗಿತ್ತು. ಶ್ರೀರಾಮಪುರ ಮಿಶನರಿಗಳು ಪ್ರಕಟಿಸುತ್ತಿದ್ದ 'ದಿಗ್ದರ್ಶನ' ಹಾಗೂ 'ಸಮಾಚಾರ ದರ್ಪಣ' 'ಇವುಗಳಿಂದ ಆರಂಭವಾಗಿ ಅನೇಕ ಬಂಗಾಲಿ ಭಾಷೆಯ ಪತ್ರಿಕೆಗಳು ಹೊರಬರುತ್ತಿದ್ದವು. 1831 ರಿಂದ 1840 ರ ಒಂದು ದಶಕದ ಅವಧಿಯಲ್ಲಿ ಬಂಗಾಲಿಯಲ್ಲಿ 30 ಪತ್ರಿಕೆಗಳು ಹೊರಬರಹತ್ತಿದವು. ಅವೆಲ್ಲ ಬಹು ದಿವಸ ಬದುಕಲಿಲ್ಲವೇನೋ ನಿಜ. ಆದರೆ ಅವುಗಳ ಪ್ರಕಟಣೆ, ಅಂದಿನ ಸಾಮಾಜಿಕ, ರಾಜಕೀಯ ಹಾಗೂ ಸಾಹಿತ್ಯಕ ಬೆಳವಣಿಗೆಗಳ ಬಗ್ಗೆ ಸಮಾಜದಲ್ಲಿದ್ದ ಆಸಕ್ತಿಯ ನಿದರ್ಶನವಾಗಿತ್ತು.

ವಿದ್ಯಾಸಾಗರರು ತತ್ವಬೋಧಿನಿ ಪತ್ರಿಕೆಯ ಸಂಪಾದಕ ಮಂಡಲಿಯಲ್ಲಿದ್ದರು ಎಂಬುದನ್ನು ಆಗಲೇ ಉಲ್ಲೇಖಿಸಲಾಗಿದೆ. ಮತ್ತು ಅವರು, ಅವರ ಸ್ನೇಹಿತರಾದ ಮದನಮೋಹನ ತರ್ಕಾಲಂಕಾರ ಅವರ ಸಹಕಾರದೊಂದಿಗೆ *ಸರ್ವಶುಭಕಾರಿ ಪತ್ರಿಕಾ* ಎಂಬ ಪತ್ರಿಕೆಯನ್ನು ಆರಂಭಿಸಿದರು. ಆದರೆ ಅದು ಬಹಳ ದಿವಸ ನಡೆಯಲಿಲ್ಲ. 1858 ರಲ್ಲಿ ಮತ್ತೆ ಅವರು ಇನ್ನೋರ್ವ ಸ್ನೇಹಿತರಾದ ದ್ವಾರಕನಾಥ ವಿದ್ಯಾಭೂಷಣ ಎಂಬುವರ ಸಹಾಯದಿಂದ *ಸೋಮಪ್ರಕಾಶ* ಎಂಬ ಪತ್ರಿಕೆಯನ್ನು ಹೊರತಂದರು. ಆರ್ಲ್ ಆಫ್ ರೊನಾರ್ಡ್ಶೇ ಹೇಳಿದಂತೆ "ಈ ಪತ್ರಿಕೆ ಬಂಗಾಲಿ ಪತ್ರಿಕೋದ್ಯಮಕ್ಕೆ ಒಂದು ಹೊಸ ಮೆರುಗನ್ನು ಇತ್ತಿತು". ಬಂಗಾಲಿ ಸಮಾಜದ ಮೇಲೆ ಅದು ಬಹಳಷ್ಟು ಪ್ರಭಾವ ಬೀರಿತು. ಆ ಪತ್ರಿಕೆಯ ಸಂಪಾದಕತ್ವವನ್ನು ದ್ವಾರಕಾನಾಥ ವಿದ್ಯಾಭೂಷಣರಿಗೆ ಒಪ್ಪಿಸಿ ವಿದ್ಯಾಸಾಗರರು ಅದಕ್ಕೆ ಸಕಲ ಆಶ್ರಯವಿತ್ತು, ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಪ್ರಗತಿಪರ ವಿಚಾರಗಳಿಗೆ ಒಂದು ಶಕ್ತಿಯುತವಾದ ಮುಖಪತ್ರಿಕೆಯಾಗಿ ಬೆಳೆಯಲು ಸಹಾಯ ಮಾಡಿದರು. *ಹಿಂದೂ ಪೇಟ್ರಿಯಟ್* ಎಂಬ ಮಧ್ಯಮ ವರ್ಗದ ಜನತೆಯ ಮುಖಪತ್ರಿಕೆಯ ಸಂಪಾದಕರಾಗಿದ್ದ ಹರೀಶಚಂದ್ರ ಮುಖರ್ಜಿ ಎಂಬುವರು ತೀರಿ ಕೊಂಡಾಗ, ಆ ಪತ್ರಿಕೆಯನ್ನು ನಡೆಸಿಕೊಂಡುಹೋಗುವ ಜವಾಬ್ದಾರಿ ವಿದ್ಯಾಸಾಗರರ ಮೇಲೆ ಬಿದ್ದಿತು. ಅವರು ಕ್ರಿಸ್ಟೋದಾಸಪಾಲ್ ಎಂಬುವರನ್ನು ಅದರ

ಸಂಪಾದಕರನ್ನಾಗಿ ನೇಮಿಸಿದರು. ಆ ಪತ್ರಿಕೆ ಉನ್ನತಮಟ್ಟದ ಪತ್ರಿಕೆಯಾಗಿ ಬೆಳೆದು, ಅಧಿಕಾರಿ ಹಾಗೂ ಅಧಿಕಾರೇತರ ವರ್ಗಗಳೆರಡರಲ್ಲಿಯೂ ಮೆಚ್ಚಿಕೆಯ ಗೌರವಾನ್ವಿತ ಪತ್ರಿಕೆಯಾಗಿ ಮೆರೆಯಿತು. ಆದರೆ ಪಾಲ್ ಅವರೊಂದಿಗೆ ಉಂಟಾದ ಭಿನ್ನಾಭಿಪ್ರಾಯಗಳ ಮೂಲಕ, ವಿದ್ಯಾಸಾಗರರು ಈ ಪತ್ರಿಕೆಯೊಡನೆ ಸಂಬಂಧ ಕಡಿದುಕೊಳ್ಳಬೇಕಾಯಿತು.

ಇವೆರಡೂ ಪತ್ರಿಕೆಗಳೊಂದಿಗೆ ವಿದ್ಯಾಸಾಗರರು ಇಟ್ಟುಕೊಂಡ ಸಂಬಂಧವನ್ನು ಗಮನಿಸಿದರೆ, ಅವರು ಸಾಮಾಜಿಕ ಹಾಗೂ ರಾಜಕೀಯ ಕಾರ್ಯಕ್ರಮಗಳ ಪುರಸ್ಕಾರಕ್ಕೆ ಪತ್ರಿಕೋದ್ಯಮ ಎಷ್ಟು ಸಹಾಯಕಾರಿ ಹಾಗೂ ಮಹತ್ವದ್ದೆಂಬುದನ್ನು ಅರಿತಿದ್ದರೆಂಬುದು ವಿಧಿತವಾಗುತ್ತದೆ. ಅದಕ್ಕಾಗಿಯೇ ಅವರು ಈ ಪತ್ರಿಕೆಗಳಿಗೆ ಸಾಧ್ಯವಾದ ಎಲ್ಲ ನೆರವನ್ನು ನೀಡಿದರು.

ವಿದ್ಯಾಸಾಗರರ ರಾಜಕೀಯ ವಿಚಾರಗಳು ಏನಿದ್ದವೆಂಬುದು ಖಚಿತವಾಗಿ ಗೊತ್ತಾಗದೆ ಉಳಿದವು. ಈ ಪತ್ರಿಕೆಗಳಲ್ಲಿ ಪ್ರಕಟವಾದ ಬರವಣಿಗೆಗಳಿಂದ ಅವುಗಳನ್ನು ಊಹಿಸುವುದು ಸೂಕ್ತವಲ್ಲ. ಆದರೆ ಸಾರ್ವಜನಿಕ ಸಮಸ್ಯೆಗಳ ಬಗೆಗೆ ಪ್ರಗತಿಪರ ಹಾಗೂ ವಿಚಾರಶೀಲವಾದ ಬರವಣಿಗೆಗಳನ್ನೊಳಗೊಂಡ ಪತ್ರಿಕೋದ್ಯಮಕ್ಕೆ ಎಲ್ಲ ರೀತಿಯ ಸಹಾಯ ಮಾಡಲು ಅವರು ಎಂದೂ ಹಿಂಜರಿಯಲಿಲ್ಲ. 1876 ರಲ್ಲಿ 'ಇಂಡಿಯನ್ ಅಸೋಸಿಯೇಶನ್' ಎಂಬ ಸಂಸ್ಥೆಯ ಅಧ್ಯಯನಗಳಿಂದ ಆನಂದ ಮೋಹನ ಬೋಸ್ ಹಾಗೂ ಸುರೇಂದ್ರನಾಥ ಬ್ಯಾನರ್ಜಿ ಅವರು ವಿದ್ಯಾಸಾಗರರು ಆ ರಾಜಕೀಯ ಸಂಸ್ಥೆಯ ಅಧ್ಯಕ್ಷರಾಗಬೇಕೆಂದು ಬಯಸಿದರು. ತಮ್ಮ ಆರೋಗ್ಯ ಸ್ಥಿತಿ ಚೆನ್ನಾಗಿಲ್ಲದ ಕಾರಣ ಅವರು ಅಧ್ಯಕ್ಷ ಸ್ಥಾನ ಸ್ವೀಕರಿಸಲು ಒಪ್ಪದಿದ್ದರೂ ದೇಶದ ಜನತೆಯ ರಾಜಕೀಯ ಜಾಗ್ರತಿಗಾಗಿ ಇಂಥ ಸಂಸ್ಥೆಯನ್ನು ಆರಂಭಿಸಿರುವ ವಿಚಾರವನ್ನು ಅವರು ಪುರಸ್ಕರಿಸಿದರು.

# 8. ನೊಂದವರ ಗೆಳೆಯ

ವಿದ್ಯಾಸಾಗರರು ಅಪಾರ ಕರುಣಾಮೂರ್ತಿ. ಅವರ ದಾನಗಳ ಪ್ರವಾಹ ನಿರಂತರವಾಗಿತ್ತು. ತಮ್ಮ ಜೀವಮಾನದಲ್ಲಿಯೇ ಅವರ ಹೆಸರು ಬಂಗಾಲದಲ್ಲಿ ಮನೆಮಾತಾಯಿತು. ಅವರ ಬಗ್ಗೆ ಕಥೆಗಳು ಎಲ್ಲರ ಬಾಯಲ್ಲಿದ್ದವು. ಅವರ ಸಮಾಜಿಕ ಸುಧಾರಣೆಯ ಕಾರ್ಯಗಳು ಮಾತ್ರವೇ ಇದಕ್ಕೆ ಕಾರಣವಾಗಿರಲಿಲ್ಲ. ಅವರ ಪರೋಪಕಾರಿ ಮನೋಭಾವ ಅವರನ್ನು ಇಷ್ಟೊಂದು ಹೆಸರುವಾಸಿಯಾಗುವಂತೆ ಮಾಡಿದವು. ಜನರು ಅವರನ್ನು ಪ್ರೀತಿಯಿಂದ 'ದಯಾಸಾಗರರು' ಎಂದು ಕರೆಯುತ್ತಿದ್ದರು. ತಮ್ಮ ವೈಯಕ್ತಿಕ ಜೀವನದಲ್ಲಿ ಅವರು ಅತ್ಯಂತ ಸಾದಾ ಹಾಗೂ ನಿರಾಡಂಬರ ವ್ಯಕ್ತಿಯಾಗಿದ್ದರು. ಆದರೆ ಅನ್ಯರಿಗಾಗಿ ಖರ್ಚು ಮಾಡುವಾಗ ಅವರ ಔದಾರ್ಯಕ್ಕೆ ಎಣೆಯೇ ಇರಲಿಲ್ಲ. ಇದು ಅವರ ಸ್ವಭಾವದ ದೋಷವೆನಿಸುವ ಮಟ್ಟಿಗೆ ಅತಿಯಾಗಿದ್ದಿತು. ಕಷ್ಟದಲ್ಲಿದ್ದ ಯಾರೂ ಅವರೆಡೆಗೆ ಹೋಗಿ ನಿರಾಶರಾಗಿ ಹಿಂದಿರುಗುತ್ತಿರಲಿಲ್ಲ. ಆರ್ಥಿಕ ತೊಂದರೆಯಲ್ಲಿದ್ದ ವಿದ್ಯಾರ್ಥಿಗಳು, ಅನಾಥರು, ವಿಧವೆಯರು ಹೀಗೆ ನೂರಾರು ಜನರು ಅವರನ್ನು ಅವಲಂಬಿಸಿ ಜೀವಿಸುತ್ತಿದ್ದರು. ಕಷ್ಟದಲ್ಲಿದ್ದ ಪರರಿಗೆ ಸಹಾಯ ಮಾಡುವುದಕ್ಕಾಗಿ ಸಾಲ ಮಾಡಿ ಹಣ ಒದಗಿಸುವ ಬುದ್ಧಿ ಯಾರಿಗೂ ಇರುವುದಿಲ್ಲ. ಆದರೆ ವಿದ್ಯಾಸಾಗರರಿಗೆ ಅದೊಂದು ಚಟವೇ ಆಗಿಬಿಟ್ಟಿತ್ತು. ಅವರು ತಮ್ಮ ನೌಕರಿ ಬಿಟ್ಟು ಕೇವಲ ತಮ್ಮ ಪುಸ್ತಕ ಹಾಗೂ ಬರವಣಿಗೆಗಳ ಆದಾಯದ ಮೇಲೆ ಜೀವನ ನಡೆಸುವ ಪ್ರಸಂಗ ಬಂದಾಗ ಕೂಡ ಅವರು ಮೊದಲಿನಷ್ಟೇ ಔದಾರ್ಯದಿಂದ ನಡೆದುಕೊಂಡರು.

ಈಗಾಗಲೇ ಉಲ್ಲೇಖಿಸಿದಂತೆ ಮೈಕೇಲ್ ಮಧುಸೂದನ ದತ್ತ ಅವರಿಗೆ ವಿದ್ಯಾಸಾಗರರು ಮಾಡಿದ ಮಹದುಪಕಾರ ಅವರ ಔದಾರ್ಯಕ್ಕೆ ಒಂದು ಬಹು ದೊಡ್ಡ ಸಾಕ್ಷಿ. ಬಂಗಾಲಿ ಕಾವ್ಯದ ಇತಿಹಾಸದಲ್ಲಿ ಕ್ರಾಂತಿಯನ್ನುಂಟುಮಾಡಿದ ಮೆಘನಾದ್ಬವ ಕಾವ್ಯದ ಕರ್ತೃ ವರ್ಸೆಲ್ಸದಲ್ಲಿ ಬಡತನ ಹಾಗೂ ಸಾಲದ ಭಾರದಿಂದ ಜರ್ಝರಿತನಾಗಿ ತನ್ನ ಫ್ರೆಂಚ್ ಹೆಂಡತಿ ಹಾಗೂ ಮಕ್ಕಳೊಡನೆ ಉಪವಾಸ ವನವಾಸ ಅನುಭವಿಸುತ್ತ, ಜೇಲಿಗೆ ಹೋಗುವ ದಾರುಣ ಸ್ಥಿತಿಯಲ್ಲಿದ್ದ. ಬಂಗಾಲದಲ್ಲಿ ಎಲ್ಲ ಮಹನೀಯರೂ ಅವನನ್ನು ನಿರಾಶೆಗೊಳಿಸಿದ ಸಂದರ್ಭದಲ್ಲಿ ಮಧುಸೂದನ ದತ್ತ ವಿದ್ಯಾಸಾಗರರಿಗೆ ಸಹಾಯ ಯಾಚಿಸಿ ಬರೆದ. ಆತ ತನ್ನ

ಹೆಂಡತಿಗೆ "ನಾನು ಸಹಾಯ ಕೇಳಿಕೊಂಡ ವ್ಯಕ್ತಿ, ಪ್ರಾಚೀನ ಋಷಿಗಳಂತೆ ಪ್ರತಿಭಾನ್ವಿತನೂ, ಜ್ಞಾನಿಯೂ ಆಗಿರುವನಲ್ಲದೆ, ಆತನು ಇಂಗ್ಲಿಷ್ ಗೃಹಸ್ಥನ ಉತ್ಸಾಹ ಹಾಗೂ ಬಂಗಾಲಿ ತಾಯಿಯ ಮಾತೃಹೃದಯವುಳ್ಳವನಾಗಿದ್ದಾನೆ" ಎಂದು ಹೇಳಿ ಸಮಾಧಾನ ಪಡಿಸಿದನಂತೆ. ಅವನು ವಿದ್ಯಾಸಾಗರರ ಬಗ್ಗೆ ಸತ್ಯವನ್ನೇ ನುಡಿದಿದ್ದ. ಅವನ ಯಾಚನೆ ನಿಷ್ಫಲವಾಗಲಿಲ್ಲ. ಮಧುಸೂದನ ಹೃದಯವಿದ್ರಾವಕ ಪತ್ರವನ್ನು ಓದಿ ಬಹಳಷ್ಟು ಮರುಗಿದ ವಿದ್ಯಾಸಾಗರರು, ಪರದೇಶಗಳಲ್ಲಿ ಇಂಥ ಸಂಕಷ್ಟ ಹಾಗೂ ಅವಮಾನಕ್ಕೀಡಾದ ಕವಿಯನ್ನು ಅವುಗಳಿಂದ ಪಾರುಮಾಡಿಯೇ ತೀರಬೇಕೆಂದು ನಿರ್ಧರಿಸಿದರು. ಅದಕ್ಕಾಗಿ ಮೈಕೇಲ್‌ನ ಸ್ನೇಹಿತರನ್ನೂ, ಹಿತಚಿಂತಕರನ್ನೂ ಸಹಾಯಕ್ಕಾಗಿ ವಿದ್ಯಾಸಾಗರರು ಯಾಚಿಸಿದರು. ಆದರೆ ಯಾರೂ ಅದಕ್ಕೆ ಕಿವಿಗೊಡಲಿಲ್ಲ. ಕೊನೆಗೆ ವಿದ್ಯಾಸಾಗರರೇ 1,500 ರೂಪಾಯಿ ಸಾಲ ಮಾಡಿ ಅವರಿಗೆ ಕಳುಹಿಸಿ ಕೊಟ್ಟರು. ಈ ವಿಷಯ ಇಲ್ಲಿಗೆ ಮುಗಿಯಲಿಲ್ಲ. ಆ ದುಂದುಗಾರ ಕವಿಗೆ ಆತ ಇಂಗ್ಲೆಂಡಿನಲ್ಲಿ ಬಾರ್-ಎಟ್-ಲಾ ಪರೀಕ್ಷೆ ಪಾಸಾಗುವವರೆಗೆ ವಿದ್ಯಾಸಾಗರರು ಹಣ ಕಳಿಸುತ್ತಲೇ ಇದ್ದರು. ಆ ದುಂದುಗಾರನಿಗೆ ಈ ಹಣ ತಿರುಗಿಸಿಕೊಡುವ ಸಾಧ್ಯತೆ ಇದೆಯೋ ಇಲ್ಲವೋ ಎಂಬುದನ್ನೂ ಪರಿಗಣಿಸದೆ, ವಿದ್ಯಾಸಾಗರರು ಹಣ ಕಳಿಸುತ್ತಲೇ ಇದ್ದರು. ಬಂಗಾಲಿ ಗದ್ಯದಲ್ಲಿ ವಿದ್ಯಾಸಾಗರರು ಎಷ್ಟು ಮಹತ್ವದ ಪಾತ್ರ ವಹಿಸಿದ್ದರೋ ಅಷ್ಟೇ ಮಹತ್ವದ ಪಾತ್ರವನ್ನು ಬಂಗಾಲಿ ಕಾವ್ಯದಲ್ಲಿ ಮೈಕೇಲ್ ಮಧುಸೂದನ ದತ್ತ ವಹಿಸಿದ್ದರು. ವಿದ್ಯಾಸಾಗರರು ಬಂಗಾಲಿ ಭಾಷೆಯ ಗದ್ಯದಲ್ಲಿ ಹೊಸ ಪ್ರಯೋಗಗಳನ್ನು ಮಾಡಿದಂತೆ ಮಧುಸೂದನ ದತ್ತ ಅವರು ಹಳೆಯ ಕಾವ್ಯಪದ್ಧತಿಗಳ ಹಾಳು ಬೀಳಿನ ಮೇಲೆ ಹೊಸ ಕಾವ್ಯ ರೂಪಗಳನ್ನು ಕಟ್ಟಿದ ಕ್ರಾಂತಿಯ ಕವಿಯಾಗಿದ್ದರು. ಈ ಇಬ್ಬರೂ ಕ್ರಾಂತಿಕಾರರಲ್ಲಿ ಒಂದು ವಿಶೇಷವಾದ ಅನ್ಯೋನ್ಯತೆ ಇದ್ದಿತು. ಮೈಕೇಲ್ ಕ್ರಿಶ್ಚಿಯನ್ ಧರ್ಮವನ್ನು ಅಂಗೀಕರಿಸಿದ್ದರಿಂದ ಅನೇಕರು ಅವನಿಂದ ದೂರವಾಗುತ್ತಿದ್ದರಲ್ಲದೆ ಕೆಲವರು ಅವರನ್ನು ತೀವ್ರವಾಗಿ ದ್ವೇಷಿಸುತ್ತಿದ್ದರು. ಆದರೆ ವಿದ್ಯಾಸಾಗರರು ಮಾತ್ರ ಮಧುಸೂದನ ದತ್ತ ಅವರನ್ನು ಪ್ರೀತಿ ಹಾಗೂ ಗೌರವದಿಂದ ಕಾಣುತ್ತಿದ್ದರು.

ಶಾಲೆಯಲ್ಲಿರುವಾಗ ವಿದ್ಯಾಸಾಗರರು ತಾವು ಸ್ವತಃ ಮನೆಯಲ್ಲಿ ನೇಯ್ದ ಸಾದಾ ಸ್ವದೇಶಿ ಬಟ್ಟೆಗಳನ್ನು ಧರಿಸುತ್ತಿದ್ದರು. ತಮಗೆ ದೊರೆತ ವಿದ್ಯಾರ್ಥಿವೇತನದ ಹಣದಲ್ಲಿ ಸಹಪಾಠಿಗಳಿಗೆ ಒಳ್ಳೇ ಬಟ್ಟೆಗಳನ್ನು ಕೊಂಡುಕೊಡುತ್ತಿದ್ದರು. ಈ ಸಹಪಾಠಿಗಳೊಂದಿಗೆ ಅವರು ಹೊಂದಿದ ಅನ್ಯೋನ್ಯತೆ ಅವರು ಬೆಳೆದು ದೊಡ್ಡವರಾದಂತೆ ಸಮಾಜದ ಎಲ್ಲ ವ್ಯಕ್ತಿಗಳ ಬಗ್ಗೆಯೂ ವ್ಯಾಪಿಸಿತು. ತಾವು ಸಣ್ಣವರಿದ್ದಾಗಿನಿಂದ ತಮ್ಮ ಜೀವನದ ಕೊನೆಯವರೆಗೂ ಅವರು ಅಸಂಖ್ಯಾತ ರೋಗಿಗಳಿಗೆ ತಮ್ಮ ಕೈಯಿಂದ ಶುಶ್ರೂಷೆ ಮಾಡಿದ್ದುಂಟು. ರಸ್ತೆಯಲ್ಲಿ ಬಿದ್ದಿದ್ದ

ಕಾಲರಾ ರೋಗಿಗಳನ್ನು ಮನೆಗೆ ತಂದು ಅವರು ಆರೈಕೆ ಮಾಡುತ್ತಿದ್ದರು. ದೀನರ ಸೇವೆಯ ಅವಕಾಶ ಒದಗಿದಾಗ ಅವರೆಂದೂ ಜಾತಿಮತ ಪಂಥಗಳನ್ನು ಪರಿಗಣಿಸುತ್ತಿರಲಿಲ್ಲ. ಅದರಲ್ಲಿಯೂ ಅವರಿಗೆ ಕರ್ಮಟಾರ (ಬಿಹಾರದಲ್ಲಿಯ ಸಂತಾಲ ಪಂಗಡದ ಜನಾಂಗದ ವಾಸಸ್ಥಾನ) ದ ಜನರೆಂದರೆ ಹೆಚ್ಚಿನ ಪ್ರೀತಿ. ಅಲ್ಲಿ ಅವರ ಮನೆಯೊಂದು ಇದ್ದಿತಲ್ಲದೆ ವಿಶ್ರಾಂತಿ ಹಾಗೂ ಆರೋಗ್ಯ ಸುಧಾರಣೆಗೆಂದು ಅವರು ಅಲ್ಲಿಗೆ ಆಗಾಗ ಹೋಗಿ ವಾಸಮಾಡುತ್ತಿದ್ದರು. ಅಲ್ಲಿಯ ಜನರಿಗೆ ಅನೇಕ ರೀತಿಯಿಂದ ಸಹಾಯ ಮಾಡುತ್ತಿದ್ದರಲ್ಲದೆ, ಅವರಿಗಾಗಿ ಒಂದು ಶಾಲೆಯನ್ನೂ ಆರಂಭಿಸಿದ್ದರು. ಸ್ವತಂತ್ರ ಭಾರತದ ಘನ ಆದರ್ಶಗಳಲ್ಲಿ ಒಂದಾದ ಹಿಂದುಳಿದ ಜನಾಂಗದ ಅಭ್ಯುದಯದ ವಿಷಯದಲ್ಲಿ ಅವರು ಸಾಕಷ್ಟು ಕಾರ್ಯ ಮಾಡಿದರು. ಒಂದು ಸಲ ಅವರ ಆರೋಗ್ಯ ಸರಿ ಇಲ್ಲದಾಗ ಅವರ ಸ್ನೇಹಿತನೊಬ್ಬ ಅವರಿಗೆ ಆರೋಗ್ಯ ಸುಧಾರಣೆಗೆಂದು ಕರ್ಮಟಾರಕ್ಕೆ ಹೋಗಲು ಸಲಹೆ ಮಾಡಿದ. ಅಲ್ಲಿಗೆ ಹೋಗಲು ತಮ್ಮಲ್ಲಿ ಹಣವಿಲ್ಲವೆಂದು ಆತನಿಗೆ ವಿದ್ಯಾಸಾಗರರು ಹೇಳಿ ಅಳತೊಡಗಿದರು. ಎಷ್ಟೋ ಜನ ಸಂತಾಲರು ಒಪ್ಪತ್ತಿನ ಊಟವಿಲ್ಲದೆ ಬಳಲುತ್ತಿರುವಾಗ ತಾವೊಬ್ಬರೇ ಊಟ ಮಾಡುವುದು ಹೇಗೆ ಸಾಧ್ಯ ಎಂದು ಉದ್ಗರಿಸಿದರು. ಅವರೆಲ್ಲರಿಗೂ ಹೊಟ್ಟೆ ತುಂಬ ಉಣಿಸಬೇಕೆಂದರೆ ಅದಕ್ಕೆ ಬೇಕಾಗುವ ಹಣ ತಮ್ಮಲ್ಲಿಲ್ಲವೆಂದು ನೊಂದುಕೊಂಡು ನುಡಿದರು. ಅದಕ್ಕಾಗಿಯೇ ತಾವು ಕರ್ಮಟಾರಕ್ಕೆ ಹೋಗಲು ಬಯಸುವುದಿಲ್ಲವೆಂದು ವಿವರಿಸಿದರು. ಆಗಿನ ಕಾಲದಲ್ಲಿಯೇ ಸಾಮಾಜಿಕಾವಾಗಿ ದಾನಧರ್ಮ ಕಾರ್ಯ ಕೈಕೊಳ್ಳುವ ವಿಚಾರ ಅವರಿಗೆ ಹೊಳೆದಿತ್ತು. 1866-67 ನೇ ಇಸ್ವಿಯಲ್ಲಿ, ಬಂಗಾಲದಲ್ಲಿ ಭೀಕರ ಬರಗಾಲ ಬಿದ್ದಾಗ ಮಿಡ್ನಾಪುರ ಹಾಗೂ ಹೂಗಳಿ ಜಿಲ್ಲೆಗಳಲ್ಲಿ ಉಚಿತ ಭೋಜನ ಶಾಲೆಗಳನ್ನು ಸರಕಾರ ಆರಂಭಿಸುವ ಸೂಚನೆಯನ್ನು ಇತ್ತವರು ವಿದ್ಯಾಸಾಗರರೇ. ಸರ್ಕಾರದ ಪ್ರಯತ್ನಗಳಿಂದ ತೃಪ್ತರಾಗದೆ, ತಮ್ಮ ಹಳ್ಳಿಯಲ್ಲಿ ಅವರೇ ಸಾರ್ವಜನಿಕರ ಸಹಾಯದಿಂದ ಉಚಿತ ಭೋಜನ ಶಾಲೆಗಳನ್ನು ನಡೆಸುವ ಹೊಸ ಕ್ರಮವನ್ನು ವಿದ್ಯಾಸಾಗರರು ಆರಂಭಿಸಿದರು. ಕೂಳಿಲ್ಲದೆ ಸಾಯಬಹುದಾಗಿದ್ದ ಎಷ್ಟೋ ಜನರು ಇದರಿಂದ ಬದುಕಿದರು. ಹಾಗೆ ಬದುಕಿದವರ ಸಂಖ್ಯೆ ಅಸಂಖ್ಯಾತ. ಈ ಪುಕ್ಕಟೆ ಅಡಿಗೆಯ ಮನೆಗಳಲ್ಲಿ 12 ಜನ ಅಡಿಗೆಯವರು ಸತತ ಮೂರು ನಾಲ್ಕು ತಿಂಗಳುಗಳ ಕಾಲ ಬರಗಾಲಪೀಡಿತ ಜನತೆಗಾಗಿ ಅಡಿಗೆ ತಯಾರಿಸುತ್ತಿದ್ದರೆಂದು ಚಂದಿ ಚರಣ ಬಂಧೋಪಾಧ್ಯಾಯ ಅವರು ಹೇಳಿದ್ದುಂಟು. ಮತ್ತೆ ಬರದ್ವಾನ ಜಿಲ್ಲೆಯಲ್ಲಿ ಮಲೇರಿಯ ಸಾಂಕ್ರಾಮಿಕ ರೋಗವಾಗಿ ಹರಡಿ, ನೂರಾರು ಜನ ಮರಣಶಯ್ಯೆಯಲ್ಲಿದ್ದಾಗ, ಅವರ ಪರಿಹಾರಕ್ಕಾಗಿ ಕ್ರಮ ಕೈಕೊಳ್ಳಲು ಸರ್ಕಾರಕ್ಕೆ ಮನವಿ ಸಲ್ಲಿಸಿದ್ದರಲ್ಲದೆ, ಸ್ವತಃ ಅವರೇ ಒಂದು ಉಚಿತ ದವಾಖಾನೆಯನ್ನು ಆರಂಭಿಸಿ ನಡೆಸಿದರು. ರೋಗಿಗಳು ಯಾವ ಜಾತಿಯವರೆಂಬುದನ್ನು ಕನಸುಮನಸಿನಲ್ಲಿಯೂ ಯೋಚಿಸದೆ ಪ್ರತಿಯೊಬ್ಬ

ರೋಗಿಯ ಆಹಾರ ಆರೈಕೆಯ ಬಗ್ಗೆ ಸ್ವತಃ ನಿಂತುಕೊಂಡು ನೋಡುತ್ತಿದ್ದರು. ಸ್ವತಃ ಬ್ರಾಹ್ಮಣರಾದರೂ ಅವರು ಅನೇಕ ಮುಸ್ಲಿಮ್ ಮಕ್ಕಳನ್ನು ಕೈಯಲ್ಲೆತ್ತಿ ಆರೈಕೆ ಮಾಡಿದ್ದುಂಟು. ಗಾಂಧೀಜಿಯವರು ಅನೇಕ ವರ್ಷಗಳ ನಂತರ ಕುಷ್ಠರೋಗಿಗಳ ಆರೈಕೆ ಮಾಡಿದ್ದರ ಪರಿಪಾಠವನ್ನು ವಿದ್ಯಾಸಾಗರರು ಬಹಳ ಮುಂಚೆಯೇ ಆರಂಭಿಸಿದ್ದರು.

ವಿದ್ಯಾಸಾಗರರು ಎಂದಿಗೂ ಪ್ರತ್ಯೇಕವಾದಿಗಳಾಗಿರಲಿಲ್ಲ. ಆದರೆ ರಾಷ್ಟ್ರಾಭಿಮಾನ ಅವರ ಹೃದಯದಲ್ಲಿ ಸದಾ ಜಾಗ್ರತವಾಗಿತ್ತು, ಆ ರಾಷ್ಟ್ರಾಭಿಮಾನದ ಸಂಕೇತವೇನೋ ಎಂಬಂತೆ ಅವರ ವೇಷಭೂಷಣವಿತ್ತು. ಧೋತರ, ಚಾದರ ಹಾಗೂ ಒಂದು ಜೊತೆ 'ಚಟ್ಟಿ' ಯನ್ನೊಳಗೊಂಡ ಅವರ ಪೋಷಾಕು ತುಂಬಾ ಸರಳವಾಗಿರುತ್ತಿತ್ತು. ('ಚಟ್ಟಿ' ಎಂದರೆ ಬೆರಳುಗಳನ್ನು ಮುಚ್ಚಿ ಹಿಮ್ಮಡಿ ಕಡೆ ತೆರೆದಿರುವ ಸರಳವಾದ ಚಪ್ಪಲಿ) ಈ ಅತ್ಯಂತ ಸಾದಾ ಪೋಷಾಕು ಅವರು ಬಡತನದ ವಂಶದಿಂದ ಬಂದದ್ದರ ಸಂಕೇತವಾಗಿ ದ್ದಂತೆ ದೇಶದ ಬಡತನದ ಪರಿಸ್ಥಿತಿಯ ಸಂಕೇತವೂ ಆಗಿದ್ದಿತು. ಅವರು ತಮ್ಮ ಪೋಷಾಕನ್ನು ರಾಷ್ಟ್ರೀಯ ಪೋಷಾಕೆಂದು ಪರಿಗಣಿಸಿದ್ದರಲ್ಲದೆ ಅದನ್ನು ಅವರು ಯಾವ ಪರಿಸ್ಥಿತಿಯಲ್ಲೂ ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಅದೇ ಪೋಷಾಕಿನಲ್ಲಿಯೇ, ಹಾಗೂ ಅದೇ ಸಾದಾ ಮೆಟ್ಟಿನಲ್ಲಿಯೇ, ಲೆಫ್ಟಿನೆಂಟ್ ಗವರ್ನರ್ ಆದಿಯಾಗಿ, ಎಲ್ಲ ಮೇಲಿನ ಸರಕಾರಿ ಅಧಿಕಾರಿಗಳನ್ನು ಭೇಟಿಯಾಗುತ್ತಿದ್ದರು. ಈ ರೀತಿ ನಡೆದುಕೊಂಡ ಮಹನೀಯರ ಇನ್ನೊಂದು ಉದಾಹರಣೆಯೆಂದರೆ ಮಹಾತ್ಮಾ ಗಾಂಧೀಜಿಯವರು ಮಾತ್ರ. ವೈಸರೀಗಲರ ಕಛೇರಿಗೂ ಈ ಸರಳವಾದ ಪೋಷಾಕಿನಲ್ಲಿ ಹೋಗುವ ಧೈರ್ಯ ಅವರಿಗೆ ಮಾತ್ರ ಇತ್ತು.

ಲೆಫ್ಟಿನೆಂಟ್ ಗವರ್ನರ್ ಹ್ಯಾಲಿಡೆ ಅವರ ಆದೇಶದ ಮೇರೆಗೆ ಒಂದೆರಡು ಸಲ, ಗವರ್ನಮೆಂಟ್ ಹೌಸಿಗೆ ಸಂಸ್ಕಾರ ವಿಧಾನ ಪೋಷಾಕಿನಲ್ಲಿ ಹೋಗಿ ಬಂದರು. ನಂತರ ಅದರ ಬಗ್ಗೆ ವಿದ್ಯಾಸಾಗರರು ತೀವ್ರ ಅಸಮಾಧಾನ ವ್ಯಕ್ತಪಡಿಸಿದ್ದರಿಂದ ಅವರ ನೈತಿಕ ನಿಲುಮೆಯನ್ನು ಗೌರವಿಸಿದ ಹ್ಯಾಲಿಡೆ ವಿದ್ಯಾಸಾಗರರು ತಮ್ಮ ಮನಸ್ಸಿಗೆ ಬಂದ ಪೋಷಾಕಿನಲ್ಲಿ ಬರಲು ಪರವಾನಿಗಿಯಿತ್ತರು. ಅವರು ಕಾಲಲ್ಲಿ ಧರಿಸಿದ ಚಟ್ಟಿಯ ಸಲುವಾಗಿ ಒಮ್ಮೆ ಏಷಿಯಾಟಿಕ್ ಸೊಸೈಟಿ ಹಾಗೂ ಕಲಕತ್ತಾದ ಇಂಡಿಯನ್ ಮ್ಯೂಜಿಯಮ್‌ಗಳಲ್ಲಿ ಅವರಿಗೆ ಒಳಗೆ ಹೋಗಲು ಪರವಾನಗಿ ನಿರಾಕರಿಸಲಾಯಿತು. ಅವರು ಸಂಬಂಧಿಸಿದ ಅಧಿಕಾರಿಗಳಿಗೆ ಇದರ ಬಗ್ಗೆ ಬಹಳ ಉಗ್ರವಾದ ದೂರನ್ನು ಸಲ್ಲಿಸಿದರು. ಈ ಘಟನೆಯ ಬಗ್ಗೆ ಬಹು ದೊಡ್ಡ ಸಾರ್ವಜನಿಕ ಚರ್ಚೆಯೇ ಉದ್ಭವವಾಯಿತು.

ಅವರ ಪ್ರಸಿದ್ಧ ಚಟ್ಟಿಯ ಬಗ್ಗೆ ಇನ್ನೊಂದು ಮೋಜಿನ ಘಟನೆಯ ಕಥೆ ಇಂದಿಗೂ ಕೇಳಿಬರುತ್ತದೆ. ಅವರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದಾಗ,

ಪ್ರೆಸಿಡೆನ್ಸಿ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಬ್ರಿಟಿಷ್ ಜನಾಂಗದವರಾಗಿದ್ದ ಶ್ರೀ ಕೇರ್ ಎಂಬುವರಲ್ಲಿಗೆ ಆಫೀಸಿನ ಕೆಲಸದ ನಿಮಿತ್ತ ಹೋಗುವ ಪ್ರಸಂಗ ಬಂದಿತು. ವಿದ್ಯಾಸಾಗರರು ಕೇರ್ ಅವರ ಕೋಣೆಯನ್ನು ಪ್ರವೇಶಿಸಿದಾಗ ಕೇರ್ ಅವರು ವಿದ್ಯಾಸಾಗರರನ್ನು ಸರಿಯಾಗಿ ಸ್ವಾಗತಿಸಲಿಲ್ಲ. ಅವರು ತಾವು ಕುಳಿತಿದ್ದ ಕುರ್ಚಿಯಲ್ಲಿಯೇ ಕುಳಿತು ಟೇಬಲ್ಲಿನ ಮೇಲೆ ತಮ್ಮ ಎರಡೂ ಕಾಲುಗಳನ್ನು ಚಾಚಿದ್ದರು. ಇಂಥ ಅನಿರೀಕ್ಷಿತ ಹಾಗೂ ಅಪಮಾನದ ಘಟನೆಯಿಂದ ವಿದ್ಯಾಸಾಗರರು ಕೋಪಗೊಂಡು ಮರಳಿದರು. ಆದರೆ ಕೆಲವೇ ದಿವಸಗಳಲ್ಲಿ ಒಂದು ಅವಸರದ ವಿಷಯ ಚರ್ಚಿಸಲು ಕೇರ್ ಅವರು ವಿದ್ಯಾಸಾಗರರ ಕೋಣೆಗೆ ಬರುವ ಪ್ರಸಂಗ ಬಂದಿತು. ಆಗ ವಿದ್ಯಾಸಾಗರರು ಕೇರ್ ತಮಗೆ ಕೆಲವು ದಿನಗಳ ಹಿಂದೆ ತೋರಿಸಿದ ಆದರೋಪಚಾರವನ್ನೇ ತೋರಿಸಿದರು. ಅವರು ಕುರ್ಚಿಯಲ್ಲಿ ಕುಳಿತು ತಮ್ಮ ಚಟ್ಟಿ ಧರಿಸಿದ ಕಾಲುಗಳನ್ನು ಟೇಬಲ್ಲಿನ ಮೇಲೆ ಚಾಚಿಕೊಂಡು ಕುಳಿತೇ ಕೇರ್ ಅವರನ್ನು ಸ್ವಾಗತಿಸಿದರು. ಕಲಕತ್ತಾದ ಮಹೋನ್ನತ ಕಾಲೇಜಿನ ಆಂಗ್ಲ ಪ್ರಿನ್ಸಿಪಾಲರು ಈ ದೇಶಿ ಪಂಡಿತರ ಕೊಬ್ಬಿದ ನಡವಳಿಕೆಯ ಬಗ್ಗೆ ರೋಷಗೊಂಡು, ಆಗಿನ ಎಜುಕೇಶನ್ ಕೌನ್ಸಿಲ್ಲಿನ ಕಾರ್ಯದರ್ಶಿಯಾಗಿದ್ದ ಡಾ. ಮಾವುತ್ ಅವರಿಗೆ ದೂರನ್ನಿತ್ತರು. ಡಾ. ಮಾವುತ್ ಅವರು ವಿದ್ಯಾಸಾಗರರ ಸ್ವಭಾವವನ್ನು ಚೆನ್ನಾಗಿ ಅರಿತಿದ್ದರು. ಅವರ ಪತ್ರಕ್ಕೆ ಉತ್ತರವಾಗಿ ವಿದ್ಯಾಸಾಗರರು ಕೊಟ್ಟ ಉತ್ತರ ಹೀಗಿತ್ತು: "ಸುಸಂಸ್ಕೃತನಲ್ಲದ, ಒರಟು ದೇಶಿಯನಾದ ನನಗೆ ಕೇರ್ ಅವರು ನೀಡಿದ ಸ್ವಾಗತದ ರೀತಿಯನ್ನು ಸುಸಂಸ್ಕೃತ ಯುರೋಪಿಯನ್ನರ ಆದರ ಸತ್ಕಾರದ ರೀತಿಯೆಂದು ತಿಳಿದು ಅವರು ಬಂದಾಗ ಅದೇ ರೀತಿಯ ಸತ್ಕಾರವನ್ನು ಅವರಿಗೆ ನೀಡಿದೆ." ಈ ಘಟನೆ ಕೊಬ್ಬಿದ ಪರದೇಸಿಯವನೊಬ್ಬ ಮಾಡಿದ ಅವಮಾನಕ್ಕೆ ತಕ್ಕುದಾದ ಪ್ರತಿಕ್ರಿಯೆ, ಅವರಲ್ಲಿದ್ದ ರಾಷ್ಟ್ರಾಭಿಮಾನ ಹಾಗೂ ಸ್ವಾಭಿಮಾನಗಳ ದ್ಯೋತಕವಾಗಿತ್ತು. ಅವರ ಚಟ್ಟಿ ಅವರ ಆಳವಾದ ರಾಜಕೀಯ ಪ್ರಜ್ಞೆಯ, ಅವರ ಗಡಸು ಸ್ವತಂತ್ರ ಪ್ರವೃತ್ತಿಯ ಹಾಗೂ ಅವರ ನೈತಿಕ ಧ್ಯೇಯ ಹಾಗೂ ದೃಢತೆಯ ಸಂಕೇತವಾಗಿದ್ದವು.

ಅವರ ವ್ಯಕ್ತಿತ್ವದ ಹಾಗೂ ಸದ್ಗುಣಗಳ ವಿವಿಧ ಮುಖಗಳನ್ನು ಬಿಂಬಿಸುವ ಹಲವಾರು ಕಥೆಗಳು ಪ್ರಚಾರದಲ್ಲಿವೆ. ಒಂದು ಸಲ ಕರ್ಮತರಾ ನಿಲ್ದಾಣದಲ್ಲಿ, ಒಬ್ಬ ಗೃಹಸ್ಥ ಇಳಿದು ಒಂದು ಸಣ್ಣ ಪೆಟ್ಟಿಗೆಯೊಂದನ್ನು ಒಯ್ಯಲು ಕೂಲಿಗಾಗಿ ಒದರಹತ್ತಿದ. ಅಷ್ಟರಲ್ಲಿ ಅತಿ ಸಾದಾ ಉಡುಪಿನಲ್ಲಿದ್ದ ಮನುಷ್ಯನೊಬ್ಬ ಅವರೆದುರಿಗೆ ಬಂದು ಅವರ ಪೆಟ್ಟಿಗೆಯನ್ನು ಒಬ್ಬ ಕೂಲಿ ಒಯ್ಯುವಂತೆ ಸ್ಟೇಷನ್ ಪ್ಲಾಟ್ ಫಾರ್ಮಿನ ಹೊರಗೆ ಒಯ್ದು ಕೊಟ್ಟ. ಆ ಗೃಹಸ್ಥ ಹೊರಗೆ ಕಾಯುತ್ತಿದ್ದ ಮೇಣೆಯನ್ನೇರಿ, ಪೆಟ್ಟಿಗೆ ತಂದವನಿಗೆ ಎರಡು ಪೈಸೆ ಹಮಾಲಿ ಕೊಡಲು ಬಂದ. ಪೆಟ್ಟಿಗೆ ತಂದ ವ್ಯಕ್ತಿ ಉತ್ತರಿಸಿದ: "ನನಗೆ ನೀವು ಏನನ್ನೂ ಕೊಡುವ ಕಾರಣವಿಲ್ಲ.

ನೀವು ಒಂದು ಸಣ್ಣ ಪೆಟ್ಟಿಗೆಯನ್ನು ಒಯ್ಯುವುದಕ್ಕೆ ಇಷ್ಟೊಂದು ಚಡಪಡಿಸುತ್ತಿದ್ದುದನ್ನು ನೋಡಿ, ನಾನು ನಿಮಗೆ ಸಹಾಯ ಮಾಡಿದೆ. ನನ್ನ ಹೆಸರು ಈಶ್ವರಚಂದ್ರ ವಿದ್ಯಾಸಾಗರ" ಎಂದು ಹೇಳಿ ಹೊರಟುಹೋದ. ಆ ಗೃಹಸ್ಥನ ಮನಸ್ಸಿನ ಪರಿಸ್ಥಿತಿ ಏನಾಗಿರಬಹುದೆಂಬುದನ್ನು ಯಾರಾದರೂ ಊಹಿಸಬಹುದು. ಒಳ್ಳೇ ಪುಸ್ತಕಗಳ ದೊಡ್ಡ ಸಂಗ್ರಹವಿದ್ದ ತಮ್ಮ ವಾಚನಾಲಯವನ್ನು ವಿದ್ಯಾಸಾಗರರು ಅತಿಯಾಗಿ ಪ್ರೀತಿಸುತ್ತಿದ್ದರು. ಕಲಕತ್ತಾದ ಬಾದುರಬಾಗನ ವಿಸ್ತರಣೆಯಲ್ಲಿದ್ದ ವಿದ್ಯಾಸಾಗರರ ಮನೆಗೆ ಒಂದು ದಿನ ಒಬ್ಬ ಗರ್ವಿಷ್ಠ ಶ್ರೀಮಂತರೊಬ್ಬರು ವಿದ್ಯಾಸಾಗರರನ್ನು ಭೇಟಿಯಾಗಲು ಬಂದಿದ್ದರು ಅವರು ಸುಮಾರು 500 ರೂಪಾಯಿ ಬೆಲೆಬಾಳುವ ಶಾಲನ್ನು ಹೊದ್ದುಕೊಂಡಿದ್ದರು. ವಿದ್ಯಾಸಾಗರರೊಂದಿಗೆ ಮಾತನಾಡುತ್ತಾ ಆ ಗೃಹಸ್ಥ, "ಇಷ್ಟೊಂದು ಹಣ ವೆಚ್ಚ ಮಾಡಿ, ಈ ಪುಸ್ತಕಗಳನ್ನು ಬೈಂಡ್ ಮಾಡಿಸುವುದರಿಂದ ಏನು ಪ್ರಯೋಜನ?" ಎಂದು ಕೇಳಿದ. ವಿದ್ಯಾಸಾಗರರು ಥಟ್ಟನೆ "ಒಂದು ಕಾಲು ರೂಪಾಯಿಯ ರಗ್ಗಿನಿಂದ ನೀವು ನಿಮ್ಮನ್ನು ಚಳಿಯಿಂದ ರಕ್ಷಿಸಿಕೊಳ್ಳಬಹುದು. ಆದರೆ ಇಷ್ಟೊಂದು ಕಿಮ್ಮತ್ತಿನ ಶಾಲನ್ನು ಹೊದ್ದುಕೊಳ್ಳುವುದರಿಂದ ಏನು ಪ್ರಯೋಜನ?" ಎಂದು ಕೇಳಿದರು. ಶ್ರೀಮಂತಿಕೆಯ ಕೊಬ್ಬು, ಗರ್ವಿಷ್ಠ ನಡವಳಿಕೆಯನ್ನು ಅವರು ಎಂದೂ ಸಹಿಸುತ್ತಿರಲಿಲ್ಲ.

ವಿದ್ಯಾಸಾಗರರ ಔದಾರ್ಯ ಒಮ್ಮೊಮ್ಮೆ ಬಹು ವಿಚಿತ್ರವಾದ ಅನಿರೀಕ್ಷಿತ ದಿಕ್ಕಿನಲ್ಲಿ ಹರಿಯುತ್ತಿತ್ತು. ಅನೇಕ ಸಲ ಅದು ಗುಪ್ತಗಾಮಿನಿಯಾಗಿರುತ್ತಿತ್ತು. ಇಂಥ ಅನೇಕ ಔದಾರ್ಯದ ಕಾರ್ಯಗಳನ್ನು ಯಾವ ತೋರಿಕೆ, ಸದ್ದು ಇಲ್ಲದೆ ಅವರು ಮಾಡುತ್ತಿದ್ದರು. ಬೀದಿಯಲ್ಲಿ ಹೋಗುತ್ತಿರುವಾಗ, ಬೀದಿಯ ಮಗ್ಗುಲಿನ ಮನೆಯಲ್ಲಿ ಯಾರಾದರೂ ಅಳುತ್ತಿರುವುದನ್ನು ಕೇಳಿದರೆ, ಆ ಮನೆಯಲ್ಲಿ ಹೋಗಿ, ಕಷ್ಟದಲ್ಲಿದ್ದ ಆ ಮನೆಯವರಿಗೆ ಅವರು ಹಣ ಕೊಟ್ಟು ಬರುತ್ತಿದ್ದರು. ಅವರು ಒಂದು ದಿನ ಮಧ್ಯರಾತ್ರಿಯ ನಂತರ ಕಲಕತ್ತಾದ ಬೀದಿಯಲ್ಲಿ ನಡೆದಿದ್ದರು. ಅದೊಂದು ಚಳಿಗಾಲದ ಥಂಡಿಯ ರಾತ್ರಿ. ಆ ಹೊತ್ತಿನಲ್ಲಿ ಕೆಲವು ವೇಶ್ಯೆಯರು ಗಿರಾಕಿಗಳಿಗಾಗಿ ಕಾಯುತ್ತ ನಿಂತಿದ್ದರು. ವಿದ್ಯಾಸಾಗರರು ಅವರೆಡೆಗೆ ಹೋಗಿ, ತಮ್ಮಲ್ಲಿದ್ದ ಹಣ ಕೊಟ್ಟು, "ತಾಯಂದಿರೇ, ಈ ಹಣವನ್ನು ತೆಗೆದುಕೊಳ್ಳಿರಿ ಮತ್ತು ನಿಮ್ಮ ನಿಮ್ಮ ನಿವಾಸಗಳಿಗೆ ಮರಳಿರಿ. ಈ ಚಳಿಯಲ್ಲಿ ನೀವು ನಿಲ್ಲಬೇಡಿರಿ" ಎಂದು ಹೇಳಿ ಕಳಿಸಿದರಂತೆ.

ತಮ್ಮ ಅನೇಕ ಕೆಲಸಗಳ ಜಂಜಾಟದಲ್ಲಿ, ಹಾಗೂ ಬಿಡುವಿಲ್ಲದ ಕೆಲಸದ ಗಡಿಬಿಡಿಯಲ್ಲಿಯೂ ಕೂಡಾ ಅವರು ತಮ್ಮಲ್ಲಿದ್ದ ಸ್ವಾಭಾವಿಕ ಹಾಸ್ಯ ಪ್ರವೃತ್ತಿಯನ್ನು ಕಳೆದುಕೊಳ್ಳಲಿಲ್ಲ. ಗಂಭೀರ ಹಾಗೂ ಸ್ವಸ್ಥಚಿತ್ತದ ಈ ಪಂಡಿತ, ನಿಜವಾಗಿಯೂ ಬಹಳ ಸ್ನೇಹಪರರಾಗಿದ್ದರು. ಅವರು ಹಲವಾರು ಸ್ನೇಹಿತರೊಡನೆ ಹರಟೆ ಹೊಡೆಯುವುದರಲ್ಲಿ, ಹಾಸ್ಯ ಮಾಡುವುದರಲ್ಲಿ ಸ್ವಲ್ಪ ಸಮಯ ಕಳೆಯುತ್ತಿದ್ದರು.

ಒಟ್ಟಾರೆ ಅವರೊಬ್ಬ ಜನರೊಂದಿಗೆ ಬೆರೆಯುವ ಸ್ವಭಾವದ ವ್ಯಕ್ತಿಯಾಗಿದ್ದರು. ಅವರು ಕೆಲವು ಸ್ನೇಹಿತರೊಂದಿಗೆ ಪಾಳೆಯ ಪ್ರಕಾರ ಎಲ್ಲಾ ಸದಸ್ಯರ ಮನೆಯಲ್ಲಿ ಊಟ ಮಾಡುವ ಯೋಜನೆಯನ್ನೊಳಗೊಂಡ ಕ್ಲಬ್ ಒಂದನ್ನು ಸ್ಥಾಪಿಸಿದ್ದರು. ಒಮ್ಮೆ ಒಬ್ಬ ಸ್ನೇಹಿತರ ಮನೆಯಲ್ಲಿ ಮೃಷ್ಟಾನ್ನ ಭೋಜನ ಏರ್ಪಾಡಾಗಿತ್ತು. ಆಗ ಒಬ್ಬ ಸದಸ್ಯ ಬಹಳಷ್ಟು ಊಟ ಮಾಡಿದ್ದರಿಂದ, ಅವನಿಗೆ ಹೊಟ್ಟೆನೋವು ಆರಂಭವಾಯಿತು. ಉಳಿದೆಲ್ಲ ಸದಸ್ಯರು ಅವರ ಹೊಟ್ಟೆ ಗಟ್ಟಿಯಿಲ್ಲದಿರುವ ಕಾರಣ ಅವನನ್ನು ಈ ಉಣ್ಣುವವರ ಕ್ಲಬ್ಬಿನಿಂದ(ಈಟರ್ಸ್ ಕ್ಲಬ್) ಹೊರಹಾಕಬೇಕೆಂದು ಒತ್ತಾಯಿಸಿದರು. ಆದರೆ ವಿದ್ಯಾಸಾಗರರು ಒಪ್ಪಲಿಲ್ಲ. "ಈ ಗೃಹಸ್ಥನು ಒಳ್ಳೆಯ ತಿಂಡಿಪೋತ. ಮರಣ ಬರುವ ಹೆದರಿಕೆಯನ್ನೂ ಲೆಕ್ಕಿಸದೆ ಉಣ್ಣುವ ಹವ್ಯಾಸವುಳ್ಳವನಾಗಿದ್ದಾನೆ. ಆದ್ದರಿಂದ ಅವನು ಈ ಉಣ್ಣುವ ಸಂಘದ ಸದಸ್ಯನಾಗಲು ಶ್ರೇಷ್ಠ ಅರ್ಹತೆಯನ್ನು ಪಡೆದ ವ್ಯಕ್ತಿಯಾಗಿದ್ದಾನೆ" ಎಂದು ವಾದಿಸಿದರು.

ಒಬ್ಬ ಕೆಳಕೋರ್ಟಿನ ನ್ಯಾಯಾಧೀಶನ ಬಗ್ಗೆ ಕಥೆಯೊಂದಿದೆ. ಆತ ಅತಿ ಮುಪ್ಪಿನ ವಯಸ್ಸಿನಲ್ಲಿ ಎರಡನೇ ಹೆಂಡತಿಯನ್ನು ಲಗ್ನವಾಗಿದ್ದ. ಅವನಿಗೆ ವಿದ್ಯಾಸಾಗರರು "ಸ್ವರ್ಗದ ಬಾಗಿಲುಗಳು ನಿನಗೆ ಪೂರ್ತಿ ತೆರೆದಿವೆ" ಎಂದು ಹೇಳಿದರು. ನ್ಯಾಯಾಧೀಶರು ಗಾಬರಿಯಾಗಿ "ಅದು ಹೇಗೆ ?" ಎಂದು ಕೇಳಿದರು. ವಿದ್ಯಾಸಾಗರರು ಹೇಳಿದರು: "ಸ್ವರ್ಗದ ಬಾಗಲಲ್ಲಿ ಒಬ್ಬ ಕಾವಲುಗಾರ ಇದ್ದಾನೆ. ಅಲ್ಲಿ ಹೋಗಬಯಸುವ ಎಲ್ಲರಿಗೂ 'ಈ ಭೂಮಿಯ ಮೇಲೆ ನೀವು ಒಳ್ಳೆ ಕೆಲಸಗಳನ್ನು ಮಾಡಿದ್ದೀರಾ ? ಇಲ್ಲವೇ ಕೆಟ್ಟ ಕೆಲಸಗಳನ್ನು ಮಾಡಿದ್ದೀರಾ ?' ಎಂದು ಕೇಳುತ್ತಾನೆ. ಯಾರು ಸತ್ಕಾರ್ಯಗಳನ್ನು ಮಾಡಿರುತ್ತಾರೋ, ಅವರು ಸೀದಾ ಸ್ವರ್ಗಕ್ಕೆ ಪ್ರವೇಶ ಪಡೆಯುತ್ತಾರೆ. ಯಾರು ಪಾಪ ಮಾಡಿರುತ್ತಾರೋ ಅವರು ನರಕಕ್ಕೆ ತಳ್ಳಲ್ಪಡುತ್ತಾರೆ. ಒಮ್ಮೆ ಒಬ್ಬ ಗೃಹಸ್ಥ ಅವನಲ್ಲಿಗೆ ತಲುಪಿದ. ಆತ ಒಳ್ಳೆಯದೇನನ್ನೂ ಮಾಡಿರಲಿಲ್ಲ, ಕೆಟ್ಟದ್ದನ್ನೂ ಮಾಡಿರಲಿಲ್ಲ. ಅವನನ್ನು ಸ್ವರ್ಗಕ್ಕೆ ಕಳಿಸಬೇಕೋ, ನರಕಕ್ಕೆ ಕಳಿಸಬೇಕೋ ಅವನಿಗೆ ತಿಳಿಯದಾಯಿತು. ಅವನ ಬಗ್ಗೆ ಹೆಚ್ಚಿನ ವಿಷಯ ತಿಳಿಯ್ಯಲೆತ್ನಿಸಿದಾಗ, ಆ ಗೃಹಸ್ಥ ತನ್ನ ಮುಪ್ಪಿನ ವಯಸ್ಸಿನಲ್ಲಿ ಎರಡನೇ ಹೆಂಡತಿಯನ್ನು ತಾನು ಮದುವೆಯಾದ ಸಂಗತಿ ಹೇಳಿದ. ಆಗ ಆ ಕಾವಲುಗಾರ ಕೂಡಲೆ ಅವನನ್ನು ಸ್ವರ್ಗಕ್ಕೆ ಬರಮಾಡಿಕೊಳ್ಳುತ್ತಾ ಹೇಳಿದ, 'ನೀನಾಗಲೇ ಪ್ರಪಂಚದಲ್ಲಿಯೇ ನರಕವನ್ನು ಅನುಭವಿಸಿರುವಿ. ಆದಕಾರಣ ನೀನು ಸ್ವರ್ಗಕ್ಕೆ ಹೋಗಲು ಅಡ್ಡಿ ಇಲ್ಲ' ಎಂದು ಹೇಳಿದನಂತೆ." ನ್ಯಾಯಾಧೀಶರಿಗೆ ತಕ್ಕ ಉತ್ತರ ದೊರೆಯಿತು.

ವಿದ್ಯಾಸಾಗರರ ಬಗ್ಗೆ ಇನ್ನೊಂದು ಕಥೆಯನ್ನು ಕೇಳಿ. ಒಂದು ದಿವಸ ವಿದ್ಯಾಸಾಗರರು ಅವರ ಸ್ನೇಹಿತರೊಂದಿಗೆ ಮಾತನಾಡುತ್ತಿದ್ದರು. ಒಬ್ಬ ಸ್ನೇಹಿತ ವಿದ್ಯಾಸಾಗರರಿಗೆ ಯಾವುದೋ ಒಬ್ಬ ವ್ಯಕ್ತಿ ಅವರ ಬಗ್ಗೆ ಬಹಳ ಕೆಟ್ಟ

ಮಾತುಗಳನ್ನಾಡುತ್ತಿದ್ದ ಎಂದು ಹೇಳಿದ. ಆಗ ವಿದ್ಯಾಸಾಗರರು "ಅದೇಕೆ? ನಾನು ಅವನಿಗೆ ಯಾವ ಉಪಕಾರವನ್ನೂ ಮಾಡಿಲ್ಲವಲ್ಲ" ಎಂದು ಉದ್ಗಾರ ತೆಗೆದರು. ಮಾನವನ ಕೃತಘ್ನತೆ ಅವರಿಗೆ ಎಷ್ಟು ಭೀಕರ ಬತ್ತಲೆಯಾಗಿ ಕಂಡಿತ್ತೆಂದರೆ, ಅವರ ಜೀವನದ ಕೊನೆಯ ದಿನಗಳಲ್ಲಿ ಈ ದೃಢ ಮನಸ್ಸಿನ ಸಮಾಜ ಸುಧಾರಕ ಕೂಡ ಬಹಳ ಹತಾಶರಾದಂತೆ ಕಂಡುಬರುತ್ತದೆ.

ವಿದ್ಯಾಸಾಗರರ ಬಗ್ಗೆ ಪ್ರಚಲಿತವಿದ್ದ ಕಥೆಗಳು ಅನೇಕ. ಅವುಗಳಲ್ಲಿ ಬಹಳಷ್ಟು ಕೇವಲ ಒಬ್ಬರ ಬಾಯಿಂದ ಒಬ್ಬರು ಕೇಳಿದ ಕಥೆಗಳೂ ಆಗಿರಬಹುದು. ಆದರೆ ಒಬ್ಬ ಸಾಮಾನ್ಯ ಮನುಷ್ಯನ ಬಗ್ಗೆ ಇಷ್ಟೊಂದು ಕಥೆಗಳು ಸುಮ್ಮನೆ ಹುಟ್ಟಿಕೊಳ್ಳುವುದಿಲ್ಲ. ಕೇವಲ ಮಹಾನ್ ವ್ಯಕ್ತಿಗಳ ಸುತ್ತ ಇಂಥ ಕಥೆಗಳ ತೇಜೋಮಂಡಲ ಹಬ್ಬಿ ಬೆಳೆಯುವುದುಂಟು.

# 9. ವಿದ್ಯಾಸಾಗರರ ಗುಣವಿಶೇಷಗಳು

ವಿದ್ಯಾಸಾಗರರ ವಿಭಿನ್ನ, ಸಂಕೀರ್ಣ ಹಾಗೂ ಆಶ್ಚರ್ಯಕರವಾದ ಸ್ವಭಾವ ಗುಣ ವಿಶೇಷಗಳನ್ನು ಅಳೆಯುವುದು ಸುಲಭ ಕಾರ್ಯವಲ್ಲ, ಅನೇಕ ದೃಷ್ಟಿಯಿಂದ ಅವರ ಸ್ವಭಾವದಲ್ಲಿ ಅತಿರಿಕ್ತವಾದ ಗುಣಗಳು ಕೂಡಿಕೊಂಡಂತೆ ಭಾಸವಾಗುತ್ತದೆ. ಅವರು ಹುಟ್ಟಿ ಬೆಳೆದು ಉಸಿರಾಡಿದ ವಾತಾವರಣ ತಲೆಮಾರಿನಿಂದ ಬಂದ ಮತೀಯ ಪೂರ್ವಗ್ರಹಗಳಿಂದ ತುಂಬಿತ್ತು. ಆದಾಗ್ಯೂ ಅವರು ಎಲ್ಲ ರೀತಿಯ ಪರಂಪರೆಯ ಅಂಧಾನುಕರಣೆಗೆ ಕಡು ವಿರೋಧಿಯಾಗಿದ್ದರು. ಅತ್ಯಂತ ಪ್ರಗತಿಪರ ಆಂದೋಲನದ ಮುಂಚೂಣಿಯಲ್ಲಿದ್ದು, ವಿದ್ಯಾಸಾಗರರು ಈ ಅಂದೋಲನದ ಕರ್ಣಧಾರತ್ವವನ್ನು ಕೂಡ ವಹಿಸಿದ್ದರು. 19ನೇ ಶತಮಾನದಲ್ಲಿ ತಲೆದೋರಿದ ಹೊಸ ಜ್ಞಾನೋದಯ ಹಾಗೂ ಪ್ರಗತಿಪರ ವಿಚಾರಗಳು, ಈ ಋಷಿಸದೃಶರಾದ ಪಂಡಿತರ ಮುಖಾಂತರ ರಭಸದಿಂದ ಹರಿಯತೊಡಗಿದವು. ಭಾರತದ ಪ್ರಾಚೀನ ತತ್ವಜ್ಞಾನ ಹಾಗೂ ಧರ್ಮ ಗ್ರಂಥಗಳನ್ನು ಆಳವಾಗಿ ಅಭ್ಯಸಿಸಿದ ವಿದ್ಯಾಸಾಗರರು ಶಿಕ್ಷಣದ ಬಗ್ಗೆ ಅತ್ಯಂತ ಆಧುನಿಕ ವಿಚಾರಗಳನ್ನು ಹೊಂದಿದ್ದವರೂ ಆಗಿದ್ದರು. ಮಧ್ಯಂತರ ಯುಗದ ಸಂಸ್ಕೃತಿಯನ್ನು ಮುಂದುವರಿಸಿಕೊಂಡು ಬಂದ ಸಮಾಜಗಳು ಆಧುನಿಕ ಉದ್ಯಮ ಪ್ರಾಧಾನ್ಯ ಸಂಸ್ಕೃತಿಗಳ ಆಘಾತವನ್ನು ಎದುರಿಸುವ ಪ್ರಸಂಗ ಬಂದಾಗ, ಅವು ಅನೇಕ ಸಲ, ತಮ್ಮ ಉಳಿವಿಗಾಗಿ, ಪ್ರತ್ಯೇಕತೆಯ ನೀತಿಗೆ ಮಾರುಹೋಗಿದ್ದುಂಟು. ಆದರೆ ವಿದ್ಯಾಸಾಗರರು ಪ್ರತ್ಯೇಕತಾವಾದಿಗಳಾಗಿರಲಿಲ್ಲ. ಅವರು ಆಧುನಿಕತೆಯ ಬೆಳಕು ಬಾರದಂತೆ, ಮನೆಯ ಬಾಗಿಲು ಕಿಟಕಿಗಳನ್ನು ಮುಚ್ಚುವ ಪ್ರವೃತ್ತಿಯುವರಾಗಿರಲಿಲ್ಲ. ಅವರು ಮೂಲತಃ ಪ್ರಮಾಣವಾದಿಯಾಗಿದ್ದರು. ತಮ್ಮ ವಿವೇಕ ಹಾಗೂ ದೃಢ ನಂಬಿಕೆಗಳಿಗೆ ವ್ಯತಿರಿಕ್ತವಾದ ಯಾವುದನ್ನೂ ಅವರು ಒಪ್ಪತಕ್ಕವರಲ್ಲ.

ತಾವು ಅನುಸರಿಸಬೇಕಾದ ಮಾರ್ಗ ಅವರ ವಿವೇಕಕ್ಕೆ ಸರಿಯೆಂದು ಒಮ್ಮೆ ಅವರಿಗೆ ಮನವರಿಕೆಯಾಯಿತೆಂದರೆ, ಆ ಮಾರ್ಗದಲ್ಲಿ ಎಂಥ ಭಯಂಕರವಾದ ಅಡೆತಡೆಗಳು ಬಂದರೂ, ಅವರು ಆ ಮಾರ್ಗದಲ್ಲಿಯೇ ಮುಂದುವರಿಯುವ ಛಲವುಳ್ಳವರಾಗಿದ್ದರು. ಅವರು ಅತ್ಯಂತ ಪ್ರಬಲ ಹಾಗೂ ಮಣಿಯಲಾರದ ಆತ್ಮಬಲವುಳ್ಳವರಾಗಿದ್ದರಲ್ಲದೆ, ನಿರ್ಭೀತ ಸ್ವತಂತ್ರ ಪ್ರವೃತ್ತಿಯುಳ್ಳವರಾಗಿದ್ದರು.

ಸಮಕಾಲೀನ ಸಮಾಜ ಜೀವನದಲ್ಲಿ ಅವರು ಸುಮಾರು ಅರ್ಧ ಶತಮಾನದವರೆಗೆ

ಅತ್ಯಂತ ಸಾಹಸಮಯ ಜೀವನವನ್ನು ನಡೆಸಿದರು. ಇದರಿಂದ ಅವರಿಗೆ ಅನೇಕ ರೀತಿಯ ಸಹಸ್ರಾರು ಜನರ ಸಂಪರ್ಕ ಒದಗಿತ್ತು. ಆದರೆ ಅವರು ಎಂದಿಗೂ ಹೆದರಿಕೆಯಿಂದಾಗಲೀ ಅಥವಾ ಸ್ವಂತದ ಲಾಭಕ್ಕಾಗಲಿ, ಅಥವಾ ಯಾರ ಅನುಗ್ರಹಕ್ಕಾಗಲಿ, ತಮ್ಮ ಜೀವನದ ಆದರ್ಶಗಳನ್ನು ಬಿಟ್ಟುಕೊಡಲಿಲ್ಲ. ಅವರು ಹತಾಶರಾಗಿ ಎಂದೂ ಸೋಲನ್ನೊಪ್ಪುವ ಸ್ವಭಾವದವರಾಗಿರಲಿಲ್ಲ. ಅವರು ಏಕಾಂಗಿಯಾಗಿದ್ದರೂ ಹೋರಾಟ ನಡೆಸುವ ಛಲಗಾರರಾಗಿದ್ದರು. ವಿಧವಾ ಪುನರ್ವಿವಾಹದ ಆಂದೋಲನ ಕೈಗೊಂಡಾಗ, ಅವರ ಅನೇಕ ಸ್ನೇಹಿತರು ಉದಾಸೀನ ತೋರಿದರು ಮತ್ತು ಅನೇಕರು ಅವರಿಗೆ ಕೈ ಕೊಟ್ಟು ದ್ರೋಹಮಾಡಿದರು ಆದರೆ ವಿದ್ಯಾಸಾಗರರು ಈ ಆಂದೋಲನದ ಹೊರೆಯನ್ನು ಒಬ್ಬಂಟಿಗರಾಗಿ ತಮ್ಮ ಭುಜದ ಮೇಲೆ ಹೊತ್ತುಕೊಂಡು ಮುಂದುವರಿದರು. ಅವರು ತಮ್ಮ ಆದರ್ಶಗಳಿಂದ ಎಂಥ ಪರಿಸ್ಥಿತಿಯಲ್ಲಿಯೂ ವಿಚಲಿತರಾಗದ ಛಲದ ಅವರ ಸ್ವಭಾವ ಅವರ ಮನೆತನದ ಕಷ್ಟಕ್ಕೆ ಬಹುಮಟ್ಟಿಗೆ ಕಾರಣವಾಯಿತೆಂಬುದನ್ನು ನಾವು ಕಾಣಬಹುದು. ಅದರ ಬಗ್ಗೆ ಮುಂದಿನ ಅಧ್ಯಾಯದಲ್ಲಿ ನಾವು ಹೆಚ್ಚಿಗೆ ಹೇಳಲಿದ್ದೇವೆ.

ಅವರು ತಮ್ಮ ಸ್ವಂತ ಊರಾದ ಬಿರಸಿಂಘಾ ಹಳ್ಳಿಯನ್ನು ಬಿಟ್ಟ ಕಥೆಯನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಓರ್ವ ವಿಧವೆಯನ್ನು ಮದುವೆಯಾಗಲು ಮುಚಿರಾಮ ಬಂಧೋಪಾಧ್ಯಾಯ ಎಂಬ ಗೃಹಸ್ಥ ವಿದ್ಯಾಸಾಗರರ ಆಶೀರ್ವಾದ ಕೋರಿದ. ವಿದ್ಯಾಸಾಗರರು ಮೊದಲು ಅದಕ್ಕೆ ಒಪ್ಪಿ ಹರಸಿದರು. ಆದರೆ ಆ ವಿವಾಹದ ವಿರುದ್ಧ ಆ ಹಳ್ಳಿಯ ಕೆಲವು ಜವಾಬ್ದಾರಿ ವ್ಯಕ್ತಿಗಳು ಕೊಟ್ಟ ಕೆಲವು ಕಾರಣಗಳಿಂದ ಪ್ರಭಾವಿತರಾಗಿ ವಿದ್ಯಾಸಾಗರರು ಈ ವಿವಾಹಕ್ಕೆ ತಮ್ಮ ಒಪ್ಪಿಗೆ ಹಿಂತೆಗೆದುಕೊಂಡರು. ಆಗ ವಿದ್ಯಾಸಾಗರರು ಬಿರಸಿಂಘಾದಲ್ಲಿಯೇ ವಾಸಿಸುತ್ತಿದ್ದರು. ಆದರೂ ವಿದ್ಯಾಸಾಗರರ ಅಣ್ಣ ತಮ್ಮಂದಿರು ಕೆಲವು ಸ್ಥಾನಿಕ ವ್ಯಕ್ತಿಗಳ ಸಹಾಯದಿಂದ ವಿದ್ಯಾಸಾಗರರ ಮನಸ್ಸಿನ ವಿರುದ್ಧ, ಇವರ ಪೂರ್ವಿಕರ ಮನೆಯ ಹತ್ತಿರ ಒಂದು ಸ್ಥಳದಲ್ಲಿ ಆ ಮದುವೆಯನ್ನು ಮಾಡಿದರು. ವಿದ್ಯಾಸಾಗರರಿಗೆ ಇದು ಅತ್ಯಂತ ವೇದನೆಯನ್ನುಂಟುಮಾಡಿತು. ಅವರು ಕೂಡಲೇ ಆ ಊರನ್ನು ಬಿಟ್ಟು ಹೊರಟು ಹೋದವರು, ಎಂದಿಗೂ ಅಲ್ಲಿಗೆ ಮರಳಲಿಲ್ಲ.

ವಿದ್ಯಾಸಾಗರರಿಗೆ ಅನೇಕ ಇಂಗ್ಲಿಷ್ ಗೃಹಸ್ಥರ ಸಂಪರ್ಕ ಉಂಟಾಗಿತ್ತು. ತಮ್ಮ ಶ್ರೇಷ್ಠ ಉದಾತ್ತ ಗುಣಗಳಿಂದಾಗಿ ಅವರೆಲ್ಲರ ಗೌರವವನ್ನು ಸಂಪಾದಿಸುತ್ತಿದ್ದರು. ಬಕ್ಲ್ಯಾಂಡ್ ಎಂಬವರು "ವಿದ್ಯಾಸಾಗರರು ತಮ್ಮ ನಿರ್ಭೀತ ಸ್ವತಂತ್ರ ಪ್ರವೃತ್ತಿಯೊಂದಿಗೆ ಎಲ್ಲ ಜನರೊಂದಿಗೂ ತಮ್ಮ ನಡವಳಿಕೆಯಲ್ಲಿ ಮಗುವಿನ ಸರಳತೆ ಹಾಗೂ ಮೃದು ಮಧುರ ಸ್ವಭಾವವನ್ನು ಹೊಂದಿದವರಾಗಿದ್ದರು" ಎಂದು ಉದ್ಗಾರ ತೆಗೆದದ್ದುಂಟು. ಆದರೆ ಬ್ರಿಟಿಷ್ ಆಳರಸರೊಂದಿಗೆ ನಡೆದುಕೊಳ್ಳುವಾಗ, ತಮ್ಮ

ಬಲಿಷ್ಠ ಸ್ವತಂತ್ರ ಪ್ರವೃತ್ತಿಯನ್ನು ಅವರೆಂದಿಗೂ ಬಿಟ್ಟುಕೊಡಲಿಲ್ಲ. ಒಂದು ಸಾಮ್ರಾಜ್ಯಶಾಹಿ ಪರರಾಷ್ಟ್ರದ ಗುಲಾಮಗಿರಿಯ ಹಿಡಿತದಲ್ಲಿ ಸಿಲುಕಿದ ದೇಶದಲ್ಲಿ ಇಂಥ ಸ್ವತಂತ್ರ ಪ್ರವೃತ್ತಿಯ ಮನುಷ್ಯ ಬಹಳ ಅಪರೂಪದ ವ್ಯಕ್ತಿಯಾಗಿದ್ದ.

ವಿದ್ವಾಂಸ, ಬರಹಗಾರ ಹಾಗೂ ಚಿಂತನಶೀಲರಾದ ಈಶ್ವರಚಂದ್ರ ವಿದ್ಯಾಸಾಗರರು ಶಕ್ತಿಶಾಲಿಯಾದ ನಿರಂತರ ಚಟುವಟಿಕೆಯ ವ್ಯಕ್ತಿಯೂ ಆಗಿದ್ದರು. ಅವರ ಜೀವನ ನಿಷ್ಠೆ ಹಾಗೂ ಮಾನವ ಸೇವೆಗೆ ಮುಡಿಪಾಗಿತ್ತು. ಈ ಸೂಕ್ಷ್ಮ ಭಾರತೀಯ ದೇಹದಲ್ಲಿ ಪಾಶ್ಚಿಮಾತ್ಯ ಮನುಷ್ಯನ ಗಡಸುತನ ಹಾಗೂ ಬೇಸರವರಿಯದ ಉತ್ಸಾಹದ ಚಿಲುಮೆ ಅಡಿಗಿದ್ದವು. ಅವರು ಒಂದೇ ಸವನೆ, ದಣಿವರಿಯದಂತೆ ಸಾವಿನ ಪರಿವೆಯಿಲ್ಲದೆ, ದುಡಿಯುತ್ತಲೇ ಇದ್ದರು. ದಿನೇ ದಿನೇ ಕ್ಷೀಣವಾಗುತ್ತಿದ್ದ ಅವರ ಆರೋಗ್ಯದ ಕಡೆಗೆ ಲಕ್ಷ್ಯ ಕೊಡಲು ಕೂಡ ಅವರಿಗೆ ಸಮಯವಿರಲಿಲ್ಲ. ಭಾವನಾಪರವಶತೆಯ ಬಂಗಾಲದ ಮೃದು ಮಧುರವಾದ ವಾತಾವರಣ ಇಂಥ ಗಡುಸಾದ ವ್ಯಕ್ತಿಯನ್ನು ಹೇಗೆ ನಿರ್ಮಿಸಲು ಸಾಧ್ಯವಾಯಿತೆಂಬುದು ಒಂದು ಪರಮಾಶ್ಚರ್ಯದ ಸಂಗತಿ.

ಈ ಛಲದ, ಹಟಮಾರಿತನದ, ಗಡಸು ವ್ಯಕ್ತಿ ಮಗುವಿನಂಥ ಸರಳ ಹಾಗೂ ಬಂಗಾಲಿ ತಾಯಿಯಂತೆ ಕೋಮಲ ಸ್ವಾಭಾವದವನಾಗಿದ್ದ. ವಿದ್ಯಾಸಾಗರರು ಕೆಲವೊಂದು ಸಲ ಮಗುವಿನಂತೆ ಅಳುತ್ತಿದ್ದರೆಂದರೆ, ಯಾರಾದರೂ ನಂಬಬಹುದೇ ? ಹೌದು, ಅವರ ಸಮಕಾಲೀನರು ನೋಡಿ ಅರಿತಂತೆ, ಅವರು ಅನೇಕ ಸಲ ಅಳುತ್ತಿದ್ದರು. ಕಷ್ಟದಲ್ಲಿರುವ ಮನಷ್ಯನನ್ನು ಕಂಡರೆ ಅವರಿಗೆ ತಡೆಯುವುದಾಗುತ್ತಿರಲಿಲ್ಲ. ಆಗ ಅವರು ಮಗುವಿನಂತೆ ಅತ್ತುಬಿಡುತ್ತಿದ್ದರು. ಅವರ ಔದಾರ್ಯದ ಬಗ್ಗೆ ಆಗಲೇ ಹೇಳಿದ್ದೇವೆ. ಅವರ ಪರೋಪಕಾರ ಬುದ್ಧಿ ಆಧುನಿಕ ಸಮಾಜ ಶಾಸ್ತ್ರದ ವ್ಯಾಖ್ಯೆಯನ್ನು ಮೀರಿದಂತಹುದು. ಅದು ಒಂದು ಅಸಾಮಾನ್ಯ ಕೋಮಲ ಹೃದಯದಿಂದ ಅನಾಯಾಸವಾಗಿ ಚಿಮ್ಮಿ ಹರಿಯುವ ಬುಗ್ಗೆಯಂತೆ ಇತ್ತು. ತನ್ನ ಆತ್ಮದ ಆಳದಲ್ಲಿ ವಿವೇಕಿಯಾದ ವಿದ್ಯಾಸಾಗರರು, ಪರೋಪಕಾರದ ವಿಷಯದಲ್ಲಿ ಮಾತ್ರ ವಿವೇಕಹೀನ ಹಾಗೂ ತಾರತಮ್ಯವಿಲ್ಲದ ಮುಗ್ಧರಾಗಿದ್ದರು. ಏನೂ ವಿಚಾರ ಮಾಡದೇ ಅವರು ಸಹಾಯ ಮಾಡಲು ಮುಂದಾಗುತ್ತಿದ್ದರು. ಸಹಾಯ ಪಡೆಯುವ ವ್ಯಕ್ತಿ ಪ್ರಾಮಾಣಿಕವಾಗಿ ಅದರ ಪ್ರಯೋಜನ ಪಡೆಯುವಂಥವನೋ ಅಥವಾ ಠಕ್ಕನೋ ಎಂಬುದನ್ನು ಕೂಡಾ ಅವರು ವಿಚಾರಿಸುತ್ತಿರಲಿಲ್ಲ. ಅನೇಕ ಪ್ರಸಂಗಗಳಲ್ಲಿ ಅವರು ದುಷ್ಟರಿಂದ ವಂಚಿತರಾದದ್ದುಂಟು. ಹಲವು ಸಲ ವಂಚಿತರಾದರೂ ಅವರು ಕೊಡುವುದನ್ನು ಮಾತ್ರ ನಿಲ್ಲಿಸಲಿಲ್ಲ. ಅವರ ಪರೋಪಕಾರ ಬುದ್ಧಿ ಸ್ವಭಾವಜನ್ಯವಾದದ್ದು.

ಸಮಾಜಿಕ ಹಾಗೂ ಧಾರ್ಮಿಕ ಕಟ್ಟುಗಳಿಂದ ಅವರು ಯಾವಾಗಲೂ ದೂರ ಉಳಿದದ್ದು ಅವರ ಒಂದು ವಿಶೇಷ. ತಮ್ಮ ಜೀವನದ ಮೊದಲಿನ ದಿನಗಳಲ್ಲಿ

ಅವರು ಅತೀ ತೀವ್ರಗಾಮಿಗಳಾದ ಯಂಗ್ ಬೆಂಗಾಲ್ ಗುಂಪಿನ ಸ್ನೇಹಿತರಾಗಿದ್ದರು. ಅವರ ಇವರ ವಿಚಾರಗಳಲ್ಲಿ ಸಾಮ್ಯತೆಗಳಿರದಿದ್ದರೂ, ಆ ಮೂರ್ತಿಭೇದಕರನ್ನು ಪ್ರಚೋದಿಸುತ್ತಿದ್ದ ಪ್ರಗತಿಶೀಲ ಧೋರಣೆಗಳಿಗೆ ವಿದ್ಯಾಸಾಗರರು ವಿರೋಧಿಗಳಾಗಿರಲಿಲ್ಲ. ಆದರೆ ಅವರು ಪ್ರಗತಿ ಹಾಗೂ ಜ್ಞಾನೋದಯದ ಹೆಸರಿನಲ್ಲಿ ಮಾಡುತ್ತಿದ್ದ ಗೊಂದಲಮಯ ಅತಿರೇಕಗಳನ್ನು ಬೆಂಬಲಿಸುತ್ತಿರಲಿಲ್ಲ. ಅದರಂತೆ ತತ್ವಬೋಧಿನಿ ಯ ಪ್ರಗತಿಪರ ನಿಲುಮೆ, ವಿದ್ಯಾಸಾಗರರ ಸೂಕ್ತವಾದ ನಿಲುಮೆಗಳಿಗೆ, ಆದರ್ಶಗಳಿಗೆ ರೂಪ ಕೊಟ್ಟಿತೆಂಬುದು ನಿಜವಾದದ್ದು. ಸಮಾಜ ಸುಧಾರಣೆಯ ಆಂದೋಲನದಲ್ಲಿ ಕೆಲವು ಬ್ರಹ್ಮೋ ಸಮಾಜ ಮುಖಂಡರು ಅವರ ಅತಿ ಹತ್ತಿರದ ವಿಶ್ವಾಸದ ಸಹ ಕಾರ್ಯಕರ್ತರಾಗಿದ್ದರು. ವಿಜಯಕುಮಾರ ಗೋಸ್ವಾಮಿ ಎಂಬ ಬಂಗಾಲದ ಧಾರ್ಮಿಕ ಮುಖಂಡರು, ಬಾಲಕರಿಗಾಗಿ ಬರೆದ ವಿದ್ಯಾಸಾಗರರ ಬೋಧೋದಯ ಎಂಬ ಪುಸ್ತಕವು ಮಕ್ಕಳಿಗೆ ಬೇಕಾದ ಎಲ್ಲ ಸಾಮಾನ್ಯ ಜ್ಞಾನದ ಸಂಗತಿಳಿಂದ ಒದಗಿರುವುದಾದರೂ, ದೇವರ ಬಗ್ಗೆ ಅದರಲ್ಲಿ ಒಂದು ಪಾಠವೂ ಇಲ್ಲ ಎಂದು ತಕರಾರು ಮಾಡಿದರು. ವಿದ್ಯಾಸಾಗರರು ಈ ಕೊರತೆಯನ್ನು ಗಮನಿಸಿ, ಅದರ ಮುಂದಿನ ಆವೃತ್ತಿಯಲ್ಲಿ ದೇವರ ಬಗ್ಗೆ ಒಂದು ಪಾಠ ಸೇರಿಸಿದರು. ಆದರೆ ಆ ಪಾಠದ ಮೊದಲನೇ ವಾಕ್ಯವೇ ಹೀಗಿತ್ತು : "ದೇವರು ಮನುಷ್ಯನ ಆತ್ಮದಂತೆ ಆಕಾರರಹಿತ." ಇದು ಬ್ರಹ್ಮೋ ಪ್ರಾರ್ಥನಾ ಮಂದಿರದಲ್ಲಿ ಸಹ ಕೇಳಿಬರುತ್ತಿದ್ದ ಪ್ರಾರ್ಥನೆಗಳ ಪ್ರತಿಧ್ವನಿಯಿದ್ದಂತಿತ್ತು.

ವಿದ್ಯಾಸಾಗರರು ನಾಸ್ತಿಕವಾದಿಯಾಗಿದ್ದರೇ ? ಇಲ್ಲವಾದರೆ ದೇವರ ಬಗ್ಗೆ ಅವರ ಕಲ್ಪನೆ ಏನಿದ್ದಿತು ? ಅವರ ವಿರೋಧಿಗಳು ಅವರನ್ನು ನಾಸ್ತಿಕರೆಂದು ಕರೆಯಲು ಹಿಂಜರಿಯಲಿಲ್ಲ, ಆಶ್ಚರ್ಯದ ಸಂಗತಿಯೆಂದರೆ ವಿದ್ಯಾಸಾಗರರು ದೇವರ ಬಗ್ಗೆ ಹಾಗೂ ತಮ್ಮ ಧಾರ್ಮಿಕ ಅಭಿಪ್ರಾಯಗಳ ಬಗ್ಗೆ ಮೌನವಾಗಿಯೇ ಇದ್ದರು. ಅವರು ಒಮ್ಮೆ ಹಾಸ್ಯಮಾಡುತ್ತ, ತಾವು ಧರ್ಮದ ಬಗ್ಗೆ ಯಾವುದೇ ಅಭಿಪ್ರಾಯ ಹೇಳದೇ ಇರುವ ಕಾರಣವೇನೆಂದರೆ, ತಮ್ಮ ಅಭಿಪ್ರಾಯಗಳು ತಪ್ಪೆಂದು ಸಿದ್ಧವಾಗಿ, ದೇವರು ಅದಕ್ಕಾಗಿ ಅವರನ್ನೇ ಶಿಕ್ಷಿಸಬಹುದು ಎಂದು ಹೇಳಿದ್ದುಂಟು! ಸರ್ವಾಂತರ್ಯಾಮಿಯಾದ ದೇವನೊಬ್ಬನಿದ್ದಾನೆ. ಆದರೆ ಅವನೆಡೆಗೆ ಹೋಗಲು ಇದೇ ಖಚಿತವಾದ ದಾರಿಯೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಅವರು ಧರ್ಮದ ಬಗ್ಗೆ ಅತಿ ವಿಶಾಲ ದೃಷ್ಟಿಯುಳ್ಳವರಾಗಿದ್ದರು. ಅವರು ಯಾವಾಗಲೂ ಬೇರೆಯವರ ಧಾರ್ಮಿಕ ವಿಚಾರಗಳಿಗೂ ಗೌರವ ಕೊಡುತ್ತಿದ್ದರು. ಅವರ ತಮ್ಮ ಶಂಭುಚಂದ್ರ ವಿದ್ಯಾರತ್ನ ಅವರು ಹೇಳುವ ಪ್ರಕಾರ, ಸಮಾಜದಲ್ಲಿ ಪ್ರಚಾರದಲ್ಲಿದ್ದ ದೇವರು ಹಾಗೂ ದೇವತೆಗಳ ಬಗೆಗೆ ಅವರಿಗೆ ನಂಬಿಕೆಯಿರಲಿಲ್ಲ. ಆದರೆ ತಮ್ಮ ತಂದೆ ತಾಯಿಗಳನ್ನೇ ದೇವರ ಸಮಾನರೆಂದು ಪೂಜಿಸುತ್ತಿದ್ದರು. ಅವರ ಮನೆತನದ ಪದ್ಧತಿಯಲ್ಲಿದ್ದ ದೀಕ್ಷೆಯನ್ನು ತೆಗೆದುಕೊಳ್ಳುವಾಗ ಅದರಲ್ಲಿ ಅವರಿಗೆ ಆಸಕ್ತಿಯಾಗಲಿ,

ಉತ್ಸಾಹವಾಗಲಿ ಇರಲಿಲ್ಲ. ಅಂತೆಯೇ ಬ್ರಾಹ್ಮಣರು ಆಚರಿಸಬೇಕಾದ ಶಿಷ್ಟಾಚಾರಗಳ ಬಗೆಗೂ ಆಸಕ್ತಿಯಿರಲಿಲ್ಲ.

ಅಂದಿನ ಸಮಾಜದಲ್ಲಿ ತಲೆದೋರುತ್ತಿದ್ದ ಎರಡು ತರಹದ ಪುನರುತ್ಥಾನಗಳ ಸಂಕೇತವೆಂಬಂತೆ, ಸಮಕಾಲೀನರಾದ ವಿದ್ಯಾಸಾಗರ ಹಾಗೂ ರಾಮಕೃಷ್ಣ ಪರಮಹಂಸ ಇವರೀರ್ವರೂ ಶೋಭಿಸುತ್ತಿದರಾದರೂ, ಅವರೀರ್ವರಲ್ಲಿ ಬಹಳಷ್ಟು ಭಿನ್ನತೆ ಕಂಡುಬರುತ್ತಿತ್ತು. 1882 ರಲ್ಲಿ ಕಲಕತ್ತಾದ ಬದುರ್‌ಬಗಾನಿನ ವಿದ್ಯಾಸಾಗರರ ಮನೆಯಲ್ಲಿ ಅವರ ಕೀರ್ತಿಯನ್ನು ಕೇಳಿ ಆಕರ್ಷಿತರಾದ ರಾಮಕೃಷ್ಣರು ಅವರನ್ನು ಭೇಟಿಯಾದರು. ಅದು ಸಂಪ್ರದಾಯಕ್ಕೆ ವಿರೋಧವಾಗಿ, ಸಂತ ಮೇಧಾವಿಯನ್ನು ಸಂದರ್ಶಿಸಿದ ಅಪೂರ್ವ ಘಟನೆಯಾಗಿದ್ದಿತು. ರಾಮಕೃಷ್ಣ ಪರಮಹಂಸರು ವಿದ್ಯಾಸಾಗರರಿಗೆ ಗೌರವ ಸಲ್ಲಿಸುತ್ತ ತಾವು "ಅನೇಕ ಗುಂಡಿ, ಕಾಲುವೆ, ನದಿಗಳನ್ನು ನೋಡಿದ ನಂತರ ಸಾಗರದ ದರ್ಶನ ಪಡೆಯಲು ಬಂದ ಅನಭವವಾಯಿತು" ಎಂದು ಉದ್ಗರಿಸಿದರು. ವಿದ್ಯಾಸಾಗರರೂ ಅವರಿಗೆ ತಕ್ಕ ಗೌರವ ಸಲ್ಲಿಸಿದರು. ಆದರೆ ಅವರು ತೋರಿಸಿದ ಮಾರ್ಗದ ಬಗ್ಗೆ ಆಸಕ್ತಿಹೊಂದಲಿಲ್ಲ. ಪರಮಹಂಸರು ಆಹ್ವಾನಿಸಿದರೂ ಕೂಡ ವಿದ್ಯಾಸಾಗರರು ಅವರ ಭೇಟಿಗೆ ಹೋಗಲಿಲ್ಲ. ವಿದ್ಯಾಸಾಗರರ ಬಗ್ಗೆ ಪರಮಹಂಸರಿಗೆ ಎಷ್ಟೋ ಆದರ ಭಾವನೆಯಿದ್ದರೂ, ಅವರನ್ನು ಕೇವಲ ವಿದ್ವಾಂಸರು ಮಾತ್ರ ಎಂದು ಪರಿಗಣಿಸಿದ್ದರಲ್ಲದೆ, ಆತ್ಮಾನುಸಂಧಾನಕ್ಕೆ ಆಸಕ್ತಿಯಿಲ್ಲದವರೆಂದು ಬಗೆದರು. ಅವರು ವಿದ್ಯಾಸಾಗರರಲ್ಲಿ ಪಾಂಡಿತ್ಯವಿದೆ; ಆದರೆ ಆತ್ಮದೃಷ್ಟಿಯಿಲ್ಲ" ಎಂದು ಹೇಳಿದರು.

ಪರಮಹಂಸರು ಬೋಧಿಸಿದ ಆತ್ಮ ಸಾಕ್ಷಾತ್ಕಾರಕ್ಕಾಗಿ ತಪಸ್ಸಿನ ದಾರಿಯಲ್ಲಿ ವಿದ್ಯಾಸಾಗರರಿಗೆ ಅಸಕ್ತಿಯಿರಲಿಲ್ಲ. ಈ ಪ್ರಪಂಚದ ಅನೇಕ ಸಮಸ್ಯೆಗಳಲ್ಲಿ ಆಸಕ್ತರಾದ ಅವರಿಗೆ ಬೇರೆ ಜಗತ್ತಿನ ಬಗ್ಗೆ ಚಿಂತಿಸಲು ಆಸಕ್ತಿಯಿರಲಿಲ್ಲ. ಅವರೂ ಸಂನ್ಯಾಸಿಯೇ ಆಗಿದ್ದರೇನೋ ನಿಜ. ಆದರೆ ಅವರದು ಬೇರೆ ರೀತಿ ಸಂನ್ಯಾಸ. ಅವರೊಬ್ಬ ಕರ್ಮಯೋಗಿ. ಅವರು ಸಾಮಾನ್ಯರು ತಿಳಿಯುವ ರೀತಿಯ ಧಾರ್ಮಿಕ ವ್ಯಕ್ತಿಯಾಗಿರದೆ, ಅವರೊಬ್ಬ ತತ್ವಜ್ಞಾನಿಯಾಗಿದ್ದರು. ಧಾರ್ಮಿಕ ಭಿನ್ನಾಭಿಪ್ರಾಯ ಹಾಗೂ ವಾದವಿವಾದಗಳಿಂದ ಅವರು ದೂರ ಉಳಿದು, ಸಾಮಾಜಿಕ ಹಾಗೂ ಶೈಕ್ಷಣಿಕ ಕ್ಷೇತ್ರಕ್ಕೆ ಮಾತ್ರ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದರು. ದೇವರ ಬಗ್ಗೆ ತಮ್ಮಲ್ಲಿದ್ದ ಧಾರ್ಮಿಕ ಶ್ರದ್ಧೆಯನ್ನು ಅವರು ಅಟ್ಟಹಾಸವಿಲ್ಲದ ಸ್ವಸ್ಥ ರೀತಿಯಲ್ಲಿ ಕಾಪಾಡಿಕೊಂಡು ಹೋದರು. ಅವರೊಬ್ಬ ಮಾನವತಾವಾದಿ. ಅವರ ಅತ್ಯುನ್ನತ ಧರ್ಮವೆಂದರೆ ಮಾನವನ ಸೇವೆ. ಅವರಿಗೆ ಧಾರ್ಮಿಕ ಆಂದೋಲನಗಳಲ್ಲಿ ನಂಬಿಕೆಯಿರಲಿಲ್ಲ. ಧಾರ್ಮಿಕ ಅಂದೋಲನಗಳು ಸಾಮಾಜಿಕ ಪ್ರಗತಿಯನ್ನು ಕುಂಠಿತಗೊಳಿಸುತ್ತವೆಯೆಂದೇ ಅವರು ಭಾವಿಸಿದ್ದರು.

ವಿಶಾಲ ತಳಹದಿಯ ವಿವೇಕಯುಕ್ತವಾದ ದೇಶದ ಪುನರುತ್ಥಾನದ ಪ್ರತೀಕ

ವಿದ್ಯಾಸಾಗರರಾಗಿದ್ದರೆ, ಪರಮಹಂಸರು ಭಾವಾವೇಶದ ಧಾರ್ಮಿಕ ಪುನರುತ್ಥಾನದ ಎರಡನೇ ತರಹದ ಪ್ರತೀಕವಾಗಿದ್ದರು. ಇವರಿಬ್ಬರಲ್ಲಿಯ ಭಿನ್ನತೆ ಸ್ಪಷ್ಟವಾಗಿ ಕಂಡುಬರುವಂತಹುದಾಗಿದ್ದಿತು.

# 10. ಒಂದು ಯುಗದ ಕೊನೆ

ವಿದ್ಯಾಸಾಗರರ ಜೀವನದ ಸರ್ವೋತ್ಕೃಷ್ಟ ಭಾಗವೆಂದರೆ ಅವರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ 1851 ರಿಂದ 1858 ರ ವರೆಗಿನ ಕಾಲ. ಈ ಏಳು ವರ್ಷಗಳು ಅವರ ಮಹಾ ಸಾಹಸಗಳ ಮತ್ತು ಮಹೋನ್ನತ ಸಾಧನೆಗಳ ವರ್ಷಗಳಾಗಿದ್ದವು. ಹಾಗೆಂದರೆ, ಸರಕಾರಿ ಹುದ್ದೆ ಬಿಟ್ಟನಂತರ ಅವರು ತಮ್ಮ ಕಾರ್ಯಗಳಿಂದ ನಿವೃತ್ತರಾದರಂತಲ್ಲ. ಅವರ ಸಾಧನೆಗಳು ಎಷ್ಟೋ ವೈಭವಪೂರ್ಣವಾಗಿದ್ದರೂ, ತಮ್ಮ ವಿಜಯಗಳ ಸರಮಾಲೆಗಳ ಮೇಲೆ ಕುಳಿತು ಮೈಮರೆಯುವ ಪ್ರವೃತ್ತಿ ಅವರದಾಗಿರಲಿಲ್ಲ. ಅವರು ಸದಾ ಉತ್ಸಾಹ ತುಂಬಿದ ಸ್ವಭಾವದವರಾಗಿದ್ದರು. ಅವರು ಅನೇಕ ತರಹದ ಸಾಮಾಜಿಕ ಹಾಗೂ ಶೈಕ್ಷಣಿಕ ಕಾರ್ಯಗಳಲ್ಲಿ ಭಾಗವಹಿಸಿದ ಸಂಗತಿಯನ್ನು ಹಿಂದಿನ ಅಧ್ಯಾಯದಲ್ಲ ಉಲ್ಲೇಖಿಸಲಾಗಿದೆ.

1864 ರ ಜುಲಾಯಿ ತಿಂಗಳಲ್ಲಿ ಅವರನ್ನು ರಾಯಲ್ ಏಷಿಯಾಟಿಕ್ ಸೊಸೈಟಿಯ ಗೌರವ ಸದಸ್ಯರೆಂದು ಮಾಡಲಾಯಿತು. ಲೀಪ್‌ಜಿಗ್ ಪುರಜನರಿಂದ ಅವರು ಗೌರವಿಸಲ್ಪಟ್ಟರು. ಅವರ ಸೇವೆಯನ್ನು ಗುರುತಿಸಿ, ಸರಕಾರ ಅವರಿಗೆ 1880 ರಲ್ಲಿ ಸಿ.ಐ.ಇ. ಪದವಿಯನ್ನಿತ್ತು ಗೌರವಿಸಿತು. ಆದರೆ ಅದರ ಬಗ್ಗೆ ಅವರು ಬಹಳ ಸಂತೋಷಪಡಲಿಲ್ಲ. ಅದನ್ನು ಸ್ವೀಕರಿಸಲು ಕೂಡ ಸ್ವಂತ ಹೋಗಲಿಲ್ಲ. 1883 ರಲ್ಲಿ ಅವರು ಪಂಜಾಬ್ ವಿಶ್ವವಿದ್ಯಾಲಯದ 'ಫೆಲೋ' ಎಂದು ನೇಮಿಸಲ್ಪಟ್ಟರು.

ವಿದ್ಯಾಸಾಗರರಿಗೆ ಅವರ ತಾಯಿಯ ಮೇಲೆ ಅಪಾರ ವಾತ್ಸಲ್ಯ. 1871 ರಲ್ಲಿ ಅವರ ತಾಯಿ ಬನಾರಸದಲ್ಲಿ ತೀರಿಕೊಂಡರು. ಇದು ವಿದ್ಯಾಸಾಗರರಿಗೆ ಬಹು ದೊಡ್ಡ ಆಘಾತವನ್ನುಂಟುಮಾಡಿತು. ಇದಾದ ಐದು ವರ್ಷಗಳ ನಂತರ ಅವರ ತಂದೆಯೂ ತೀರಿಕೊಂಡರು. ಅವರ ಹೆಂಡತಿ ತೀವ್ರ ತರಹದ ಆಮಶಂಕೆಯ ರೋಗದಿಂದ ಬಳಲುತ್ತಿದ್ದರು. ಅವರೂ 1888 ರ ಆಗಸ್ಟ್ ತಿಂಗಳಲ್ಲಿ ತೀರಿಕೊಂಡರು. ಇದಾದ ಮೂರು ವರ್ಷಗಳ ನಂತರ ವಿದ್ಯಾಸಾಗರರು ತೀರಿಕೊಂಡರು.

ವಿದ್ಯಾಸಾಗರರಿಗೆ ಬದುಕಿನ ಅಣ್ಣ ತಮ್ಮಂದಿರೆಂದು ಮೂವರು ಮಾತ್ರ. ಅವರೆಂದರೆ ದೀನಬಂಧು, ಶಂಭುಚಂದ್ರ ಹಾಗೂ ಇಶಾನ್. ಈ ಮೂವರ ಯೋಗಕ್ಷೇಮದ ಬಗ್ಗೆ ವಿದ್ಯಾಸಾಗರರು ಬಹಳ ಆಸಕ್ತರಾಗಿದ್ದರು. ವಿದ್ಯಾಸಾಗರರಿಗೆ

ಒಬ್ಬ ಮಗ ಹಾಗೂ ನಾಲ್ಕು ಹೆಣ್ಣು ಮಕ್ಕಳಿದ್ದರು. ಅವರ ಹಿರಿಯ ಅಳಿಯನಾದ ಗೋಪಾಲ ಚಂದ್ರ ಎರಡು ಮಕ್ಕಳನ್ನು ಬಿಟ್ಟು ಚಿಕ್ಕ ವಯಸ್ಸಿನಲ್ಲಿಯೇ ತೀರಿಹೋದ. ಇದು ವಿದ್ಯಾಸಾಗರರಿಗೆ ಮತ್ತೊಂದು ಬಹು ದೊಡ್ಡ ಆಘಾತವಾಗಿ ಪರಿಣಮಿಸಿತು.

ವಿದ್ಯಾಸಾಗರರು ತಮ್ಮ ಅವಿಭಕ್ತ ಕುಟುಂಬದ ಸದಸ್ಯರ ಬಗ್ಗೆ ಸದಾ ಕಾಳಜಿ ವಹಿಸುತ್ತಿದ್ದರಲ್ಲದೆ ಅವರಿಗೆ ತಪ್ಪದೇ ಮೇಲಿಂದ ಮೇಲೆ ಹಣ ಕೊಡುತ್ತಲೇ ಇದ್ದರು. ಆದರೂ ಅವರ ಮನೆಯ ಜೀವನ ಅಷ್ಟೊಂದು ಸುಖಮಯವಾಗಿರಲಿಲ್ಲ. ಇಷ್ಟೊಂದು ಪ್ರಕಾಶಮಾನವಾದ ಬದುಕನ್ನು ಅವರು ಬದುಕಿದರೂ, ಅವರ ಹೆಂಡತಿಯಾದ ದಿನಮಯದೇವಿಯ ಯಾವ ಪಾತ್ರವಿರದ ಸಂಗತಿ ಅತ್ಯಂತ ಆಶ್ಚರ್ಯಕರವಾದದ್ದು. ಸ್ತ್ರೀ ಶಿಕ್ಷಣದ ನಿರಂತರ ಹೋರಾಟಗಾರರಾದ ಅವರು ತಮ್ಮ ಹೆಂಡತಿಗೆ ಶಿಕ್ಷಣ ಕೊಡಲಿಲ್ಲ. ಅದಕ್ಕೆ ಕಾರಣ ಅವರ ತಂದೆ ಠಾಕೂರ ದಾಸರು ಸ್ತ್ರೀ ಶಿಕ್ಷಣಕ್ಕೆ ವಿರೋಧಿಯಾಗಿದ್ದರೆಂಬುದೇ ಇರಬೇಕು. ಹೀಗೆ ಅವರ ಹಾಗೂ ಅವರ ಹೆಂಡತಿಯ ನಡುವೆ ಬಹು ದೊಡ್ಡ ಬೌದ್ಧಿಕ ಅಂತರವಿದ್ದಿತು. ಒಂದೆಡೆ ವಿದ್ಯಾಸಾಗರರು ತಮ್ಮ ತಂದೆ ತಾಯಿಗಳ ಬಗ್ಗೆ ಅತಿ ವಾತ್ಸಲ್ಯಪೂರ್ಣ ಸಂಬಂಧ ಹೊಂದಿದವರಾಗಿದ್ದರು. ಇನ್ನೊಂದೆಡೆ ಅವರು ಸಮಾಜಕಾರ್ಯದ ಬಗ್ಗೆ ತಮ್ಮ ಎಲ್ಲ ಸಮಯವನ್ನು ಕಳೆಯುವ ಪ್ರವೃತ್ತಿಯವರಾಗಿದ್ದರು. ಇವೆಲ್ಲ ಕಾರಣಗಳಿಂದಾಗಿ ಒಬ್ಬ ಒಳ್ಳೇ ಜ್ಞಾನಿ ಹಾಗೂ ಪ್ರಗತಿಪರ ವಿಚಾರದ ಗಂಡನ ಪತ್ನಿಯಾಗಿ ತಾನು ಹೊಂದಿರಬೇಕಾದ ಸ್ಥಾನವನ್ನು ಹೊಂದಿ, ಅವರ ಜೀವನದಲ್ಲಿ ಆಡಬೇಕಾದ ಪಾತ್ರವನ್ನು ದಿನಮಯಿದೇವಿ ಎಂದಿಗೂ ಆಡಲಿಲ್ಲ. ಅವರ ಒಬ್ಬನೇ ಒಬ್ಬ ಮಗನು ಕೂಡ ಅವರ ಸಂಬಂಧವು ಅಷ್ಟೊಂದು ಸರಿಯಾಗಿರಲಿಲ್ಲದ್ದರಿಂದ, ಅವನಿಗೆ ತಮ್ಮ ಪಶ್ಚಾತ್ ಆಸ್ತಿಯ ಬಾಧ್ಯತೆಯನ್ನು ಅವರು ಹಿಂತೆಗೆದುಕೊಂಡರು. ಇದು ಅವರ ಮತ್ತು ಅವರ ಹೆಂಡತಿಯ ನಡುವಿನ ಸಂಬಂಧವನ್ನು ಹದಗೆಡಿಸಲಿಕ್ಕೆ ಮತ್ತೊಂದು ಕಾರಣವಾಯಿತು. ನಯನಚಂದ್ರನು ಅವರ ತಂದೆಯವರಷ್ಟೇ ಹಠಮಾರಿಯಾಗಿದ್ದ. ಕೊನೆಗೆ ಆತ ಪಶ್ಚಾತ್ತಾಪಪಟ್ಟು ತನ್ನ ತಂದೆಯೊಂದಿಗೆ ಅನ್ಯೋನ್ಯತೆ ಅಪೇಕ್ಷೆ ಪಟ್ಟು ಹಿಂತಿರುಗಿ ಬಂದ. ವಿದ್ಯಾಸಾಗರರ ತಮ್ಮಂದಿರಲ್ಲಿ ಒಬ್ಬನಾದ ದೀನಬಂಧು ಎಂಬುವನು ವಿದ್ಯಾಸಾಗರರ 'ಸಂಸ್ಕೃತ ಪ್ರೆಸ್' ತನ್ನದೆಂದು ಸಾಧಿಸಿ ಕೋರ್ಟಿಗೆ ಕೂಡ ಹೋಗುವ ಹವಣಿಕೆಯಲ್ಲಿದ್ದ. ವಿದ್ಯಾಸಾಗರು ಮಾತ್ರ ಎಲ್ಲರ ಬಗೆಗೂ ಉದಾರಿಗಳಾಗಿಯೇ ನಡೆದುಕೊಂಡು, ಎಲ್ಲರಿಗೂ ಧನಸಹಾಯ ಮಾಡುತ್ತಲೇ ಹೋದರು.

ಎಷ್ಟೋ ದಿವಸಗಳವರೆಗೆ ವಿದ್ಯಾಸಾಗರರು ಅನಾರೋಗ್ಯದಿಂದ ಬಳಲುತ್ತಿದ್ದರು. 1868 ರ ಡಿಸೆಂಬರ್ ತಿಂಗಳಲ್ಲಿ ಅವರು ಅನುಭವಿಸಿದ ಅಪಘಾತದಲ್ಲಿ, ಅವರ ಕರುಳಿಗೆ ಪೆಟ್ಟು ಬಿದ್ದು, ಅವರ ಜಠರ ಸುಧಾರಿಸದಷ್ಟು ಕೆಟ್ಟುಹೋಯಿತು. ಅವರು ಆರೋಗ್ಯ ಸುಧಾರಣೆಗಾಗಿ ಊರಿಂದ ಊರಿಗೆ ಸ್ಥಳ ಬದಲಾಯಿಸಿದರೂ

ಅದರಿಂದ ಹೆಚ್ಚಿನ ಪ್ರಯೋಜನವಾಗಲಿಲ್ಲ. ತಾವು ಎಲ್ಲರಿಂದ ದೂರವಾಗುತ್ತಿದ್ದೇನೆಂಬ ಭಾವನೆ, ಹಾಗೂ ಸ್ವಲ್ಪಮಟ್ಟಿನ ನಿರಾಶೆ ಅವರನ್ನು ಆವರಿಸತೊಡಗಿತ್ತು. ತನ್ನ ತೀರ ಸಮೀಪದವರಿಂದ ದೂರವಾಗುತ್ತಿರುವೆನೆಂಬ ಭಾವನೆಯಿಲ್ಲದೆ, ನಂಬಿದ ಅನೇಕರು ಮೋಸಮಾಡಿ ದ್ರೋಹ ಬಗೆಯುವುದನ್ನು ಕಂಡು ಅವರು ಸಹಿಸದಾದರು. ಅವರ ಜೀವನದ ಬಹು ದೊಡ್ಡ ಸಾಧನೆಯಾದ ವಿಧವಾ ಪುನರ್ವಿವಾಹದ ಬಗ್ಗೆ ಕೂಡ ಅವರ ಆಸಕ್ತಿ ಸಾವಕಾಶವಾಗಿ ಕಡಿಮೆಯಾಗತೊಡಗಿತು. ಪರಂಪರೆಗೆ ಪುನರ್ಜೀವ ತುಂಬುವ ಪ್ರವೃತ್ತಿ ಮತ್ತೆ ಕಾಣಿಸಿಕೊಳ್ಳಹತ್ತಿತು. ಪ್ರಗತಿಪರ ವಿಚಾರಪ್ರವೃತ್ತಿ ಹಿಂದೆ ಬೀಳತೊಡಗಿತು. ಹೊಸದಾಗಿ ತಲೆಯೆತ್ತುತ್ತಿದ್ದ ಈ ಶಕ್ತಿಗಳ ಮಧ್ಯದಲ್ಲಿ ಅವರು ಏಕಾಕಿಯಾಗತೊಡಗಿದ್ದರು.

1888 ರಲ್ಲಿ ಅವರ ಹೆಂಡತಿಯ ನಿಧನ ಅವರಿಗೆ ಕೊನೆಯ ಹಾಗೂ ಅತ್ಯಂತ ಕ್ರೂರವಾದ ಆಘಾತವಾಗಿ ಪರಿಣಮಿಸಿತು. ಅವರ ರೋಗ ಮತ್ತಷ್ಟು ಉಲ್ಬಣಗೊಂಡಿತು. ಅದು ಹೊಟ್ಟೆಯ ಕ್ಯಾನ್ಸರ್ ಎಂದು ಸಂದೇಹಿಸಲಾಯಿತು. ಕಲಕತ್ತಾದಲ್ಲಿಯ ಭಾರತೀಯ ಹಾಗೂ ಯುರೋಪಿಯನ್ ಶ್ರೇಷ್ಠ ಡಾಕ್ಟರರು ಅವರನ್ನು ಆರೈಕೆ ಮಾಡುತ್ತಿದ್ದರು. ಆದರೆ ಅವರ ಸಾವನ್ನು ಯಾರಿಂದಲೂ ತಡೆಯಲಾಗಲಿಲ್ಲ. ಹೋಮಿಯೋಪಥಿ ಔಷಧಗಳನ್ನು ಪ್ರಯೋಗಿಸಲಾಯಿತು. ಅದರಿಂದಲೂ ಪ್ರಯೋಜನವಾಗಲಿಲ್ಲ. ಅವರು ತಮ್ಮ 70 ನೇ ವರ್ಷ ತುಂಬಿದ ಕೆಲವೇ ದಿನಗಳಲ್ಲಿ, ಅಂದರೆ 1891ರ ಜುಲೈ 29 ರಂದು ನಿಧನರಾದರು. ಅವರ ಮರಣದೊಂದಿಗೆ ಒಂದು ಯುಗ ಕೊನೆಗೊಂಡಿತು.

ವಿದ್ಯಾಸಾಗರರು ರಾಜಾರಾಮ ಮೋಹನರಾಯರ ಕಾರ್ಯಪರಂಪರೆಯ ಉತ್ತರಾಧಿಕಾರಿಯಾಗಿದ್ದರು. ರಾಜಾರಾಮರು ಆರಂಭಿಸಿದ ಕಾರ್ಯವನ್ನು ಅವರು ಮುಂದುವರಿಸಿಕೊಂಡುಬಂದರು. ಆದರೆ ಆ ಪ್ರಖ್ಯಾತ ಪೂರ್ವಾಧಿಕಾರಿಯಂತೆ ಅವರು ಯಾವ ಧಾರ್ಮಿಕವಾದ ಪ್ರತಿವಾದಗಳಲ್ಲಿಯೂ ಸಿಕ್ಕಿಹಾಕಿಕೊಳ್ಳಲಿಲ್ಲ ಹಾಗೂ ಹಿಂದೂ ಧರ್ಮದ ಚೌಕಟ್ಟಿನ ಹೊರಗೆ ಯಾವ ಸುಧಾರಣೆಯನ್ನೂ ಕೈಗೊಳ್ಳಲಿಲ್ಲ. ಆದರೆ ಹಿಂದೂ ಧರ್ಮಶಾಸ್ತ್ರದ ಮಿತಿಯಲ್ಲಿ ಅವರು ಆಮೂಲಾಗ್ರ ಯತ್ನಗಳಿಂದ ಸಮಾಜದಲ್ಲಿ ಬಹಳಷ್ಟು ಬದಲಾವಣೆ ತರಲು ಹವಣಿಸಿದರು. ಸಮಾಜ ಅರಗಿಸಿಕೊಳ್ಳುವ ಶಕ್ತಿಯನ್ನು ಮೀರಿ ಬದಲಾವಣೆ ಮಾಡುವ ಸಾಹಸ ಅವರೆಂದೂ ಮಾಡಲಿಲ್ಲ. ಹಿಂದೂ ಧರ್ಮದ ಕಕ್ಷೆಯಲ್ಲಿಯೇ ಏನೆಲ್ಲ ಮಾಡಬೇಕೆಂಬ ಅವರ ನಿರ್ಧಾರ ಅವರ ವಾಸ್ತವದೃಷ್ಟಿಯ ದ್ಯೋತಕವಾಗಿತ್ತು.

ವಿದ್ಯಾಸಾಗರರು ಮಾಡಿದ ಸುಧಾರಣೆಗಳು ಬಂಗಾಲದ ಹೊರಗೂ ಬಹಳಷ್ಟು ಪ್ರಭಾವ ಬೀರಿದವು. ವಿದ್ಯಾಸಾಗರರ ಪ್ರಯತ್ನದ ಫಲವಾಗಿ ಕೌನ್ಸಿಲ್ಲಿನಲ್ಲಿ ಮಂಡಿಸಲ್ಪಟ್ಟ ವಿಧವಾ ಪುನರ್ವಿವಾಹ ಮಸೂದೆಯ ಪರವಾಗಿ ಹಾಗೂ ವಿರೋಧವಾಗಿ ಬಂದ ಪ್ರತಿಕ್ರಿಯೆಗಳ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ಉಲ್ಲೇಖಿಸಲಾಗಿದೆ.

ಬಂಗಾಲದಲ್ಲಿಯಂತೆ, ಮಹಾರಾಷ್ಟ್ರದಲ್ಲಿಯೂ ಕೂಡಾ ಸಮಾಜದಲ್ಲಿ ಹೊಸ ಪ್ರಜ್ಞೆ ಮೂಡಿದ್ದನ್ನು ಕಾಣಬಹುದಾಗಿತ್ತು. ಈ ಸಂದರ್ಭದಲ್ಲಿ ವಿದ್ಯಾಸಾಗರರು ತಾವು ವಿಧವಾ ಪುನರ್ವಿವಾಹದ ಬಗ್ಗೆ ಬರೆದ ಎರಡು ಚಿಕ್ಕ ಪುಸ್ತಕಗಳನ್ನು, ಅವರ ವಿಚಾರಗಳು ದೇಶದ ತುಂಬ ಎಲ್ಲ ಜನರಿಗೆ ಮುಟ್ಟಬೇಕೆಂಬ ಉದ್ದೇಶದಿಂದ, ಇಂಗ್ಲಿಷ್‌ನಲ್ಲಿ ಭಾಷಾಂತರಿಸಿ 1856 ರಲ್ಲಿ *Marriage of Hindu Widows* ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದರು. 1856 ರಲ್ಲಿ ಮಹಾರಾಷ್ಟ್ರದ ಪ್ರಸಿದ್ಧ ಸಮಾಜ ಸುಧಾರಕರಾದ ವಿಷ್ಣುಶಾಸ್ತ್ರಿ ಪಂಡಿತ ಅವರು ಅದನ್ನು ಮರಾಠಿಯಲ್ಲಿ ಭಾಷಾಂತರಿಸಿದರು. ಬಂಗಾಲದಲ್ಲಿ ಈಶ್ವರಚಂದ್ರ ವಿದ್ಯಾಸಾಗರರಂತೆ ವಿಷ್ಣುಶಾಸ್ತ್ರಿಯವರು 1866 ರಲ್ಲಿಯೇ ಮುಂಬಯಿಯಲ್ಲಿ ಆರಂಭವಾದ 'ವಿಧವಾ ಪುನರ್ವಿವಾಹ ಮಂಡಳಿ' ಯ ಮುಖಾಂತರ ಮತ್ತು ಅನೇಕ ಸುಶಿಕ್ಷಿತ ಭಾರತೀಯರ ಸಹಾಯದಿಂದ ಈ ಆಂದೋಲನಗಳ ಉದ್ದೇಶಗಳನ್ನು ಸಫಲಗೊಳಿಸುವ ಯತ್ನಗಳನ್ನು ಮುಂದುವರಿಸಿದರು.

ವಿಧವಾ ಪುನರ್ವಿವಾಹವನ್ನು ಕಾಯಿದೆಯಿಂದ ವಿಧಿವತ್ತಾಗಿ ಮಾಡಿದರೂ ಮೊದಮೊದಲು ಅದು ಕಾರ್ಯರೂಪದಲ್ಲಿ ಬರುವುದರ ಬಗ್ಗೆ ಅಷ್ಟೊಂದು ಪ್ರಗತಿ ಕಂಡು ಬರಲಿಲ್ಲ. ಸಿ.ವಿ. ಚಿಂತಾಮಣಿಯವರು ಸಂಪಾದಿಸಿದ *Indian Social Reform* ಗ್ರಂಥದಲ್ಲಿ ವಾಮನರಾವ್, ಮಾಧವ ಕೋಲಟಕರ ಹೇಳಿದಂತೆ, "ವಿಷ್ಣುಶಾಸ್ತ್ರಿಯವರಲ್ಲಿ ಡೆಕ್ಕನ್ ಭಾಗವು ತನ್ನ ವಿದ್ಯಾಸಾಗರರನ್ನು ಕಂಡುಕೊಂಡಿತು." ರಾನಡೆ, ತೆಲಂಗ ಮುಂತಾದವರೊಂದಿಗೆ ಅವರು ಒಳ್ಳೇ ಪ್ರಬಲವಾದ ಆರಂಭವನ್ನು ಮಾಡಿದರು. ಮಹಾರಾಷ್ಟ್ರದಲ್ಲಿ ವಿಧವಾ ಪುನರ್ವಿವಾಹವನ್ನೊಳಗೊಂಡ ಸಮಾಜ ಸುಧಾರಣೆಗಳ ಹಿಂದೆ ಸ್ವತಃ ರಾನಡೆ ಅವರ ಬೌದ್ಧಿಕ ಶಕ್ತಿ ಕೆಲಸ ಮಾಡುತ್ತಿತ್ತು. ಅವರ *Vedic Authority for Widow Remarriage* ಎಂಬ ಲೇಖನದಲ್ಲಿ ವಿದ್ಯಾಸಾಗರರು ಪರಾಶರನ ಆಧಾರದ ಮೇಲೆ (1870) ಮಂಡಿಸಿದ ವಿಚಾರಗಳೇ ಪುನರುಚ್ಚಾರಗೊಂಡವು. ವಿದ್ಯಾಸಾಗರರು ರಾನಡೆಯವರ ಬಗ್ಗೆ ಗೌರವದ ಮಾತುಗಳನ್ನಾಡುತ್ತ, "ತನ್ನ ಜನಾಂಗದ ಸ್ತ್ರೀಯರ ವಿಮೋಚನೆಯ ಆದರ್ಶಕ್ಕಾಗಿ ಮಾನವನು ಪಡೆಯಬಹುದಾದ ಶ್ರೇಷ್ಠ ಪ್ರತಿಭೆ ಹಾಗೂ ತಮ್ಮ ಜೀವನದ ಅತಿ ಮಹತ್ವಪೂರ್ಣ ದಿನಗಳನ್ನೆಲ್ಲ ಈ ಉದಾರ ಆದರ್ಶಕ್ಕಾಗಿ ಧಾರೆಯೆರೆದು ತಮ್ಮ ಸಂಶೋಧನೆ ಹಾಗೂ ಇತರ ಅಪೂರ್ವ ಕೊಡುಗೆಗಳಿಂದ ಕೀರ್ತಿಶೇಷರಾಗಿದ್ದಾರೆ. ಮನುಷ್ಯ ಸ್ವಭಾವದಲ್ಲಿ ಶ್ರೇಷ್ಠವೂ ಒಳ್ಳೆಯದೂ ಯಾವುದು ಇದೆಯೋ ಅದೆಲ್ಲಕ್ಕೂ ಮನೆ ಮನೆಯಲ್ಲಿ ಕೇಳಿಬರುವ ಅವರ ಹೆಸರು ಪ್ರೀತಿಯಿಂದ ಅನೇಕರ ಬಾಯಲ್ಲಿ ಪ್ರತಿಧ್ವನಿಗೊಳ್ಳುತ್ತಿದೆ. ಮುಂದೆ ಬರಬಹುದಾದ ಒಳ್ಳೆಯದೆಲ್ಲಕ್ಕೆ ಅವರು ಸ್ಫೂರ್ತಿಯಾಗಿದ್ದಾರೆ" ಎಂದು ಹೊಗಳಿದ್ದುಂಟು. ಬಲಾತ್ಕಾರದ ವೈಧವ್ಯ ಹಾಗೂ ಬಾಲವಿವಾಹಗಳನ್ನು ತಡೆಗಟ್ಟಲು ಮಲಬಾರಿ ಮಾಡಿದ ಉದಾತ್ತ ಪ್ರಯತ್ನಗಳಲ್ಲಿಯೂ,

ವಿದ್ಯಾಸಾಗರರು ಮಾಡಿದ ಮಹತ್ತರವಾದ ಪ್ರಯತ್ನಗಳ ಪ್ರಭಾವವನ್ನು ಕಾಣಬಹದು. ಇಂಥ ಬಲಹೀನಗೊಳಿಸುವ ಸಮಾಜದ ಅನಿಷ್ಟ ಪದ್ಧತಿಗಳನ್ನು ತೊಡೆದುಹಾಕಲು ಅವರೂ ವಿದ್ಯಾಸಾಗರರಂತೆ ಸರ್ಕಾರದ ಸೇವೆಯನ್ನು ಪಡೆಯುವ ಮಾರ್ಗದಲ್ಲಿಯೇ ನಡೆದರು. ಮಹಾರಾಷ್ಟ್ರದಲ್ಲಿ ಸಮಾಜ ಸುಧಾರಣೆಯ ಆಂದೋಲನ ಬಲಶಾಲಿಯಾಗುತ್ತಾ ನಡೆದಂತೆ ಇದೇ ರೀತಿಯ ಆಂದೋಲನಗಳು ದಕ್ಷಿಣದಲ್ಲಿಯೂ ಕಾಣಿಸಿಕೊಳ್ಳತೊಡಗಿದವು. 1869 ರಲ್ಲಿಯೇ ಅಲ್ಲಿ ವಿಧವಾ ಪುನರ್ವಿವಾಹದ ಬಗ್ಗೆ ವಾದ ಪ್ರತಿವಾದಗಳು ಆರಂಭವಾಗಿದ್ದವು. ಅದನ್ನು ವಿರೋಧಿಸಿದವರನ್ನು ದಿವಾನ ಬಹದ್ದೂರ್ ರಘುನಾಥರಾವ್ ಹಾಗೂ ಚೆಂಬಲರಾವ್ ಅವರು ಬಲವಾಗಿ ಖಂಡಿಸಿದರು. ಈ ಆಂದೋಲನ ಸಫಲಗೊಂಡ ಈ ಪ್ರಾಂತದಲ್ಲಿ 1879 ರಲ್ಲಿ ತೆಲುಗು ಬ್ರಾಹ್ಮಣರಾದ ಶ್ರೀ ವೀರೇಶಲಿಂಗಂ ಪಂತುಲು ಎಂಬುವರ ಆಶ್ರಯದಲ್ಲಿ ಮೊಟ್ಟಮೊದಲಿನ ವಿಧವಾ ಪುನರ್ವಿವಾಹ ನೇರವೇರಿತು.

ಇವೆಲ್ಲ ಪ್ರಯತ್ನಗಳು ಸಫಲವಾದುವೆಂದು ಹೇಳಲು ಬರುವಂತಿಲ್ಲ. ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳಬಹುದು. ಅದೆಂದರೆ ಒಂದೇ ಸಂಗತಿ: ಪಾಶ್ಚಿಮಾತ್ಯ ಶಿಕ್ಷಣ ಮನುಷ್ಯರ ಮನಸ್ಸಿನ ಮೇಲೆ ಎರಡು ವಿಭಿನ್ನ ರೀತಿಯ ಪರಿಣಾಮಗಳನ್ನುಂಟುಮಾಡಿತು. ಅದು ಪಾಶ್ಚಿಮಾತ್ಯದ ಪ್ರಮಾಣಬದ್ಧ ವಾಸ್ತವವಾದದ ಕೆಲವು ಗುಣಗಳನ್ನು ಪ್ರಚೋದಿಸಿ ಸಮಾಜವನ್ನು ಆಧುನಿಕ ರೀತಿಯಲ್ಲಿ ಪುನರ್ರಚಿಸಬೇಕೆಂಬ ವಿಚಾರಗಳನ್ನು ಕುದುರಿಸಿತು. ಆಮೇಲೆ ಅದರ ವಿರುದ್ಧ ಪ್ರತಿಕ್ರಿಯೆಯೂ ಆರಂಭವಾಯಿತು. ಈ ಪ್ರವೃತ್ತಿಯೆಂದರೆ, ಪಾಶ್ಚಿಮಾತ್ಯವಾದದ್ದೆಲ್ಲವನ್ನು ತಿರಸ್ಕರಿಸಿ, ನಮ್ಮ ಹಿಂದಿನದೆಲ್ಲವನ್ನು ಪುನಶ್ಚೇತನಗೊಳಿಸಬೇಕೆಂಬುವ ಪ್ರವೃತ್ತಿ. ಇದು ಸಾಮಾನ್ಯ ಜನರಿಗೆ ಬಹಳ ಹಿಡಿಸುವ ವಿಚಾರವಾಗಿತ್ತು. ಇದು ಬಹು ದೊಡ್ಡ ಪ್ರಭಾವ ಬೀರಿತು. ರಾಜಕಾರಣದಲ್ಲಂತೂ ಇದು ಅತಿರೇಕಕ್ಕೆ ಹೋಯಿತು. ಮೊದಲಿನ ವಿಶಾಲ ಧೋರಣೆಗೆ ಇದು ವಿರೋಧಿಯಾಗಿತ್ತು. ಪಾಶ್ಚಿಮಾತ್ಯವೆಲ್ಲವೂ ತ್ಯಾಜ್ಯವೆಂತಲೂ ಹಳೆಯದೆಲ್ಲ ಮತ್ತೆ ಪುನರುಜ್ಜೀವನ ಗೊಳಸಲು ಯೋಗ್ಯ ಎಂಬ ವಿಚಾರದ ಧರ್ಮಸಂದೇಶ ಪ್ರಖರವಾಗಿ ಹಬ್ಬತೊಡಗಿತು. ಸಮಾಜ ಸುಧಾರಣೆಯ ಆಂದೋಲನ ಹಿಂದೆ ಬಿದ್ದಿತು. ಸಮಾಜ ಸುಧಾರಣೆಗಿಂತ ಮುಂಚೆ ರಾಜಕೀಯ ಸುಧಾರಣೆಯಾಗಬೇಕು. ಅಲ್ಲಿಯವರೆಗೆ ಸಮಾಜ ಸುಧಾರಣೆಯ ಕಾರ್ಯ ನಿಧಾನವಾಗಿ ಸಾಗಬೇಕು.

ಸಮಾಜ ಸುಧಾರಣೆಯ ಬಗ್ಗೆ ಎದ್ದ ಈ ವಾದವಿವಾದಗಳ ಸುಳಿಯಲ್ಲಿ ವಿದ್ಯಾಸಾಗರರದು ಒಂದು ವಿಶಿಷ್ಟವಾದ ನಿಲುಮೆ. ಅವರ ದೃಷ್ಟಿಕೋನ ಕೇವಲ ಪಾಶ್ಚಿಮಾತ್ಯ ರೀತಿಯ ದೃಷ್ಟಿಕೋನವಾಗಿರಲಿಲ್ಲ. ಆದರೆ ಅವರು ನಿಷ್ಠುರವಾಗಿ ಪರಂಪರೆಯ ದೃಷ್ಟಿಕೋನಕ್ಕೆ ವಿರೋಧಿಯಾಗಿದ್ದರು. ಶಾಸ್ತ್ರಗಳನ್ನು ಕಣ್ಣು ಮುಚ್ಚಿ ಅನುಸರಿಸುವುದನ್ನು ಅವರು ಎಂದೂ ಬೆಂಬಲಿಸಲಿಲ್ಲ. ವಿವೇಕದ ದೃಷ್ಟಿಯಿಂದ

ಅವರು ಶಾಸ್ತ್ರದ ಕಟ್ಟಳೆಗಳನ್ನು ಕೂಡ ಪರೀಕ್ಷಿಸುತ್ತಿದ್ದರು. ಆ ದೃಷ್ಟಿಯಿಂದ ಅವರು ಬುದ್ಧಿ ಪ್ರಮಾಣದಲ್ಲಿ ನಂಬಿಕೆಯಿಟ್ಟ ವಿವೇಕವಾದಿಯಾಗಿದ್ದ, ತೂಕದ ಅಭಿಪ್ರಾಯ ಹೊಂದಿದ ಸಮಾಜ ಸುಧಾರಕರಾಗಿದ್ದರು. ಆದ್ದರಿಂದ ಅವರು ಹಿಂಡನ್ನಗಲಿದ ಗಜದಂತೆ ಒಬ್ಬಂಟಿಗರಾಗಿಯೇ ಸಾಗಿದ್ದರು. ರಾಜಕೀಯ ಕ್ಷೇತ್ರದಲ್ಲಿ ಆ ದಿನಗಳಲ್ಲಿ ವಿಶಾಲ ದೃಷ್ಟಿಯ ವಿಚಾರಗಳ ಪ್ರವೃತ್ತಿ ಹೆಚ್ಚುತ್ತಲಿತ್ತು. ಸಮಾಜ ಹಿತಚಿಂತನೆಯ ವಿಚಾರದಲ್ಲಿ ಅವರು ಯಾವಾಗಲೂ ವಿಶಾಲ ಭಾವನೆಯುಳ್ಳವ ರಾಗಿದ್ದರು. ಕೇವಲ ಸಾಮಾಜಿಕ ಆಂದೋನ ಸಾಕಾಗುವುದಿಲ್ಲ. ಆ ಸುಧಾರಣೆಗಳನ್ನು ಗಟ್ಟಿಯಾದ ತಳಹದಿಯ ಮೇಲೆ ನಿಲ್ಲಿಸಬೇಕಾದರೆ ಕಾಯಿದೆ ತಳಹದಿ ಬೇಕೆಂದು ಅವರು ಬಲವಾಗಿ ನಂಬಿದ್ದರು. ಭಾರತೀಯ ಸಮಾಜ ಸುಧಾರಣೆಯ ಕಾರ್ಯದಲ್ಲಿ ಸರ್ಕಾರವನ್ನು ಯಾಚಿಸಲು ಅವರು ಹಿಂದೆ ಮುಂದೆ ನೋಡಲಿಲ್ಲ. ಆಳುವ ಪರದೇಶಿಯರು ಭಾರತೀಯ ಸಾಮಾಜಿಕ ಸುಧಾರಣೆಯ ವಿಷಯದಲ್ಲಿ ಕೈಹಾಕಕೂಡದೆಂಬ ಹಿಂದಿನವರ ವಿಚಾರಕ್ಕೆ ಅವರ ಒಪ್ಪಿಗೆಯಿರಲಿಲ್ಲ. ಪರದೇಶದವರನ್ನಾಗಲಿ, ಪರದೇಶದವರ ಪ್ರಭಾವವನ್ನಾಗಲಿ ಪೂರ್ತಿ ದೂರ ಮಾಡಬೇಕೆಂಬ ಅಭಿಪ್ರಾಯ ಅವರದಾಗಿರಲಿಲ್ಲ. ಈ ಸಂದರ್ಭದಲ್ಲಿ ರಾನಡೆ ಅವರು ಕೂಡ ಸಮಾಜ ಸುಧಾರಣೆಯ ಕಾರ್ಯದಲ್ಲಿ ಸರಕಾರ ಕೈಹಾಕಬಾರದೆಂಬ ಅಭಿಪ್ರಾಯದವರಾಗಿರಲಿಲ್ಲ. ಪುನರುತ್ಥಾನದ ಜ್ಞಾನೋದಯದ ವಿಚಾರಪ್ರಣಾಲಿಗ ನುಗುಣವಾದ ಸ್ವಂತದ ವಿವೇಕ ಬುದ್ಧಿಗೆ ಪ್ರಾಧಾನ್ಯ ಕೊಡಬೇಕೆಂಬುದೇ ವಿದ್ಯಾಸಾಗರರ ನಿಲುಮೆಯಾಗಿತ್ತು. ಸುಧಾರಣೆ ಬಹುಮಟ್ಟಿಗೆ ಆಗಿನ ವಾತಾವರಣದಲ್ಲಿತ್ತು. ಅದು ಆಗ ಸ್ಫುರಿಸಿದ ಜ್ಞಾನ ಹಾಗೂ ಸಾಮಾಜಿಕ ಪ್ರಜ್ಞೆಯ ಫಲವೇ ಆಗಿದ್ದಿತು. ಆದರೆ ವಿದ್ಯಾಸಾಗರರ ವ್ಯಕ್ತಿತ್ವದಲ್ಲಿ ಅದು ಅತ್ಯಂತ ರಮ್ಯವಾದ ಹೂವಿನ ಗುಚ್ಛದಂತೆ ಅರಳಿತು. ದೇಶದಲ್ಲಿಯ ಸಾಮಾಜಿಕ ಪ್ರಜ್ಞೆಯನ್ನು ಅವರು ಎಷ್ಟು ಚೆನ್ನಾಗಿ ಜಾಗೃತಗೊಳಿಸಿದರೆಂದರೆ ಅವರ ಆಂದೋಲನ ಸ್ವಲ್ಪಕಾಲ ಹಿಂದೆ ಬಿದ್ದರೂ ಕೊನೆಗೆ ಅದಕ್ಕೆ ಸೋಲೆಂಬುದೇ ಇರಲಿಲ್ಲ. ಅನೇಕ ತರಹದ ಸಮಾಜ ಸುಧಾರಣೆಯ ಆಂದೋಲನಗಳು ರಾಜಕೀಯ ಆಂದೋಲನದೊಂದಿಗೆ ಹಾಸುಹೊಕ್ಕಾಗಿ ಬಲಿಷ್ಠವಾಗಿ ನಡೆದುಕೊಂಡೇ ಹೋದವು. ಸ್ವತಃ ಗಾಂಧೀಜಿಯವರೇ ಓರ್ವ ಶ್ರೇಷ್ಠ ಸಮಾಜ ಸುಧಾರಕರಾಗಿದ್ದರು. ಅವರು ಬಾಲ್ಯ ವಿವಾಹಕ್ಕೆ ಕಡು ವಿರೋಧಿಯಾಗಿದ್ದರು. ಚಿಕ್ಕವಯಸ್ಸಿನ ವಿಧವೆಯರ ಪುನರ್ವಿವಾಹಕ್ಕಾಗಿ ಅವರು ಹೋರಾಟ ನಡೆಸಿದರು.

ಸಿ.ಎಚ್.ಹೀಮಸಾಥ್ ಹೀಗೆ ಹೇಳಿದ್ದಾರೆ : "ಭಾರತದ ಸಮಾಜ ಸುಧಾರಣೆಯ ಇತಿಹಾಸದಲ್ಲಿ ವಿಧವಾ ಪುನರ್ವಿವಾಹದ ಆಂದೋಲನವು ಒಂದು ಮಹತ್ವದ ಭಾಗವಾಗಿದೆ. ಸ್ವತಂತ್ರ ಭಾರತದ ಸ್ತ್ರೀಯರು ಅಲ್ಲಿಯವರೆಗೆ ಅನಾಮಿಕವಾಗಿದ್ದ ಒಂದು ಸಣ್ಣ ಹಳ್ಳಿಯಾದ ಬಿರಸಿಂಘಾದ ಈ ಸರಳ ಸಾದಾ ಪೋಷಾಕಿನ ಪಂಡಿತನನ್ನು ಬಹಳ ಕೃತಜ್ಞತೆಯಿಂದ ನೆನೆಯಲು ಬಲವಾದ ಕಾರಣಗಳಿವೆ.

ಭಾರತೀಯ ಸ್ತ್ರೀಕುಲಕ್ಕೆ ಯಾರೂ ಎಂದೆಂದಿಗೂ ಮಾಡಲಾರದ ಉಪಕಾರ ಮಾಡಿದ ಮಹಾ ವ್ಯಕ್ತಿ ಈಶ್ವರಚಂದ್ರ ವಿದ್ಯಾಸಾಗರರು."

Laser Typeset at M/s. Saravu Graphic Impressions, New Delhi and
Printed at M/s. Central Electric Press, New Delhi.